ಶರಣ ಸಾಹಿತ್ಯ ಗ್ರಂಥಮಾಲಾ-೪

ಮಹಾಕವಿ ರಾಘವಾಂಕ

ವಿರಚಿತ

# ವೀರೇಶ ಚರಿತೆ



ಸಂಪಾದಕರು ಮತ್ತು ಪ್ರಕಾಶಕರು

ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರೀ

(ಹುಲುಕುಂಟೆಮಠ ತುಮಕೂರು.)

೧೯೪೩.

# ಮುನ್ನುಡಿ

—೦—

ರಾಘವಾಂಕನ ವೀರೇಶ ಚರಿತೆಯ ಪ್ರಥಮ ಮುದ್ರಣ ಮುಗಿದು ಹೋದುದರಿಂದ ಈಗ ದ್ವಿತೀಯ ಮುದ್ರಣವನ್ನು ಪ್ರಕಟಿಸಲಾಗಿದೆ. ಈ ಗ್ರಂಥವು ತುಮಕೂರು ಜಿಲ್ಲಾ ದಂಡಿನಶಿಬಿರದ ವೇ॥ ಕಲ್ಲುಮಠದ ಕಲ್ಲಯ್ಯನವರು ಕೃಪೆ ಮಾಡಿ ಕೊಟ್ಟ ಒಂದು ತಾಳೆಯೋಲೆಯ ಸಹಾಯದಿಂದಲೂ, ರಾಯಚೂರು ವೇ॥ ಪಂಡಿತ ಸೂಗವೀರ ಶರ್ಮರು ಕಳುಹಿಸಿಕೊಟ್ಟ ಒಂದು ಕೈ ಬರೆಹದ ಪ್ರತಿಯ ಸಹಾಯದಿಂದಲೂ ಮುದ್ರಿತವಾಗಿದೆ. ನಮಗೆ ದೊರೆತ ಎರಡೂ ಪ್ರತಿಗಳಲ್ಲಿ ದೋಷಗಳು ಬಹಳವಾಗಿವೆ. ಆದುದರಿಂದ ಬೇರೊಂದು ಶುದ್ಧವಾದ ತಾಳೆಯ ಪ್ರತಿ ಸಿಗುವ ವರೆಗೆ ಈ ಗ್ರಂಥವನ್ನು ನಿರ್ದೋಷವಾಗಿ ಸಂಸ್ಕರಿಸಲು ಸಾಧ್ಯವಿಲ್ಲವಾಗಿದೆ. ಆದುಕಾರಣ ಕನ್ನಡ ಸಾಹಿತ್ಯ ಪ್ರೇಮಿಗಳಾದ ಮಹನೀಯರು ಎಲ್ಲಿಯಾದರೂ ಇದರ ತಾಳೆಯ ಪ್ರತಿ ಸಿಕ್ಕರೆ ನಮಗೆ ಕಳುಹಿಸಿ ಉಪಕರಿಸಬೇಕೆಂದು ಪ್ರಾರ್ಥಿಸುತ್ತೇವೆ.

ಕವಿಕಾವ್ಯ ವಿಚಾರಗಳನ್ನು ಕುರಿತು ಸಂಗ್ರಹವಾಗಿ ಮುಂದೆ ಬರೆಯಲಾಗಿದೆ. ರಾಘವಾಂಕನ ಸಮಗ್ರ ವಿಷಯಗಳನ್ನು ತಿಳಿಯಲಿಚ್ಛಿಸುವವರು ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ಬೇಗನೆ ಪ್ರಕಟವಾಗಲಿರುವ 'ರಾಘವಾಂಕ ಪ್ರಶಸ್ತಿ' ಎಂಬ ಗ್ರಂಥವನ್ನು ಅವಲೋಕಿಸಬೇಕೆಂದು ಕೋರಿಕೆ. ರಾಘವಾಂಕನ ಗ್ರಂಥವಾಚಕರ ಸೌಕರ್ಯಕ್ಕಾಗಿಯೂ, ಪುಸ್ತಕದ ಸೌಂದರ್ಯವನ್ನು ಹೆಚ್ಚಿಸುವ ಸಲುವಾಗಿಯೂ ಈ ಪುಸ್ತಕದಲ್ಲಿ ಕವಿಯ ಇಷ್ಟದೇವತೆಯಾದ ಪಂಪಾವಿರೂಪಾಕ್ಷ ದೇವಾಲಯ, ಕಥಾನಾಯಕ ಓರುಂಗಲ್ಲು ವೀರೇಶ್ವರ, ಹಾಗೂ ಪ್ರಸನ್ನ ವೀರಭದ್ರ ದೇವರು, ಬೇಲೂರಿನಲ್ಲಿರುವ ರಾಘವಾಂಕನ ಸಮಾಧಿ ಈ ಚಿತ್ರಗಳನ್ನು ಪ್ರಕಟಿಸಲಾಗಿದೆ.

—ಸಂಪಾದಕ.

# ವಿಷಯ ಸೂಚಿಕೆ.



## ಚಿತ್ರಗಳು.

# ಕವಿ ಕಾವ್ಯ ವಿಚಾರ

---

ಕವಿ ರಾಘವಾಂಕನು ಕನ್ನಡ ನಾಡಿನ ಚರಿತ್ರೆಯಲ್ಲಿ ಮನ್ನಣೆಯನ್ನು ಪಡೆದಿರುವ ಪಂಪಾಕ್ಷೇತ್ರದವನು. ತುಂಗಭದ್ರೆಯ ಪಾವನ ಸಾನ್ನಿಧ್ಯದಿಂದ ಪುನೀತನಾದವನು. ಜಗದ್ಗುರು ಪಂಪಾ ವಿರೂಪಾಕ್ಷನ ಅನುಗ್ರಹಕ್ಕೆ ಪಾತ್ರನಾದವನು. ಇವನ ತಂದೆ ವೀರಶೈವ ಧರ್ಮದಲ್ಲಿ ಕಡುನಿಷ್ಠೆಯುಳ್ಳ ಮಹಾದೇವ ಭಟ್ಟ. ತಾಯಿ ಸಾಧ್ವೀಮಣಿ ರುದ್ರಾಣಿದೇವಿ. ಈ ಪಾವನದಂಪತಿಗಳ ಸುಪುತ್ರನೇ ಕವಿರಾಘವಾಂಕ. ಈ ರಾಘವಾಂಕನ ಸೋದರಮಾವನು ಕನ್ನಡ ಸಾಹಿತ್ಯದಲ್ಲಿ 'ಕವಿಚಕ್ರವರ್ತಿ' ಎನಿಸಿರುವ ಹರಿಹರದೇವ. ರಾಘವಾಂಕನ ವಿದ್ಯಾಭ್ಯಾಸವು ಹಂಪೆಯಲ್ಲಿ ತುಂಗಭದ್ರಾ ತೀರದಲ್ಲಿದ್ದ ಹರೀಶ್ವರನ ಗುರುಕುಲದಲ್ಲಿಯೇ ನಡೆಯಿತು. ಹರಿಹರನು ಕವಿರಾಘವಾಂಕನಿಗೆ ಸೋದರ ಮಾವನೂ ಅಹುದು. ವಿದ್ಯಾಗುರುವೂ ಅಹುದು. ಕವಿಯ ಬಾಲ್ಯದಲ್ಲಿ ಮತಧರ್ಮ ಸಂಸ್ಕಾರಗಳಾದ ಲಿಂಗಧಾರಣ ಶಿವದೀಕ್ಷಾದಿಗಳು ಹರಿಹರನಿಂದಲೇ ನಡೆದುವು. ಆದುದರಿಂದ ರಾಘವಾಂಕನಿಗೆ ವೀರಶೈವ ಪದ್ಧತಿಯಂತೆ ಹರಿಹರನು ದೀಕ್ಷಾಗುರು ಮತ್ತು ಮೋಕ್ಷಗುರು ಎನಿಸಿದ್ದಾನೆ.

## ಕವಿಯ ಗ್ರಂಥಗಳು

ರಾಘವಾಂಕ ಪಂಡಿತನು (೧) ಹರಿಶ್ಚಂದ್ರ ಕಾವ್ಯ (೨) ಸಿದ್ಧರಾಮ ಪುರಾಣ (೩) ಸೋಮನಾಥ ಚರಿತೆ (೪) ವೀರೇಶ ಚರಿತೆ (೫) ಶರಭ ಚಾರಿತ್ರ್ಯ (೬) ಹರಿಹರ ಮಹತ್ವ ಎಂಬ ಆರು ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಮೊದಲ ನಾಲ್ಕು ಗ್ರಂಥಗಳು ಪ್ರಕಟವಾಗಿವೆ. ಕಡೆಯ ಎರಡು ಗ್ರಂಥಗಳು ಕಾಲಗರ್ಭದಲ್ಲಿ ಅಡಗಿ ಕೂತಿವೆ. ಇವೆರಡೂ ಗ್ರಂಥಗಳು ಸಿಕ್ಕಿದರೆ ಕನ್ನಡ ನಾಡಿಗೆ ಮಹೋಪಕಾರವಾಗುವುದರಲ್ಲಿ ಅನುಮಾನವಿಲ್ಲ. 'ಹರಿಹರ ಮಹತ್ವ' ಎಂಬುದು ಕವಿಯು ತನ್ನ ಗುರುವಾದ ಹರಿಹರನನ್ನು ಕುರಿತು ಬರೆದಿರುವ ಕಾವ್ಯವೆಂದು ತಿಳಿದು ಬರುವುದರಿಂದ ಆ ಗ್ರಂಥವು ಕನ್ನಡ ಸಾಹಿತ್ಯ, ಕರ್ಣಾಟಕದ ಚರಿತ್ರೆ ಮತ್ತು ವೀರಶೈವ ಧರ್ಮ ಇವುಗಳ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವೆಂದು ಹೇಳಬಹುದು. ರಾಘವಾಂಕನಿಗೆ 'ಉಭಯ ಕವಿ ಕಮಲ ರವಿ' ಎಂಬ ಬಿರುದು ಇರುವುದರಿಂದ ಇವನು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ರಚಿಸಿರಬೇಕು. ಇಲ್ಲವಾದರೆ ಅವನ ಸಮಕಾಲೀನ ವಿದ್ವಾಂಸರು ಇವನಿಗೆ ಇಂತಹ ಘನವಾದ ಬಿರುದನ್ನು ಕೊಡುವುದಾಗಲಿ, ಅದನ್ನು ಜನರು ಒಪ್ಪಿಕೊಳ್ಳುವುದಾಗಲಿ ಅಸಂಭವ. ಆದುದರಿಂದ ಉಭಯ ಕವಿ ರಾಘವಾಂಕನು ಸಂಸ್ಕೃತದಲ್ಲಿ ಕೆಲವು ಕಾವ್ಯಗಳನ್ನು ಬರೆದಿರಬೇಕೆಂದು ನಾವು ತರ್ಕಿಸಬಹುದಾಗಿದೆ

ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಪುರಾಣ ಮತ್ತು ಸೋಮನಾಥ ಚರಿತ್ರೆಗಳನ್ನು ವಾರ್ಧಕ ಷಟ್ಪದಿಯಲ್ಲಿಯೂ, ವೀರೇಶ ಚರಿತೆಯನ್ನು ಉದ್ದಂಡ ಷಟ್ಪದಿಯಲ್ಲಿಯೂ ಕವಿ ಬರೆದಿದ್ದಾನೆ. ಈಗ ಉಪಲಬ್ಧವಿಲ್ಲದ 'ಹರಿಹರಮಹತ್ವ' ಮತ್ತು 'ಶರಭ ಚಾರಿತ್ರ್ಯ'ಗಳಲ್ಲಿ ಯಾವುದಾದರೊಂದು ಶರಷಟ್ಪದಿಯಲ್ಲಿ ರಚಿತವಾಗಿರಬೇಕೆಂದು ಊಹಿಸಬೇಕಾಗಿದೆ. ಅನುಭವ ಶಿಖಾಮಣಿಯನ್ನು ಬರೆದ ನಾರಸಿಂಹನು ತನ್ನ ಕಾವ್ಯದ ಪೀಠಿಕೆಯಲ್ಲಿ ರಾಘವಾಂಕನ ಶರಷಟ್ಪದಿ ಮಾರ್ಗವಿಡಿದು ತಾನು ಕಾವ್ಯವನ್ನು ಬರಿಯುವುದಾಗಿ ಪ್ರತಿಜ್ಞೆ ಮಾಡಿರುವುದು ಮೇಲೆ ಕಂಡ ಊಹೆಗೆ ಆಧಾರವಾಗಿದೆ. ಕನ್ನಡ ಸಾಹಿತ್ಯದಲ್ಲಿ ರಾಘವಾಂಕನೇ ಷಟ್ಪದಿಯಲ್ಲಿ ಕಾವ್ಯಗಳನ್ನು ಬರೆಯಲು ಮೊದಲಿಗನೆಂದೂ, ಷಟ್ಪದಿಯ ಆಚಾರ್ಯ ಪುರುಷನೆಂದೂ ಇದು ವರೆಗೆ ನಡೆದ ಸಂಶೋಧನದಿಂದ ಸಿದ್ಧವಾಗಿದೆ. ಈ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳೂ ಉಂಟು.

ಹರಿಶ್ಚಂದ್ರ ಕಾವ್ಯವು ಕರುಣಾರಸ ಪ್ರಧಾನವಾಗಿಯೂ, ಸಿದ್ಧರಾಮ ಪುರಾಣವು ಭಕ್ತಿರಸ ಪ್ರಧಾನವಾಗಿಯೂ, ಸೋಮನಾಥ ಚರಿತೆಯು ಶೃಂಗಾರರಸ ಪ್ರಧಾನವಾಗಿಯೂ, ವೀರೇಶ ಚರಿತೆಯು ವೀರರಸ ಪ್ರಧಾನವಾಗಿಯೂ ಇವೆ. ಇವನ ಶೈಲಿ ನಾರಿಕೇಳ ಪಾಕವೂ ಅಲ್ಲ. ದ್ರಾಕ್ಷಾ ಪಾಕವೂ ಅಲ್ಲ. ಮಧ್ಯಮವಾದ ಕದಳೀ ಪಾಕವೆನಿಸಿದೆ. ಆದುದರಿಂದ ಇವನ ಕಾವ್ಯಗಳು ಓದುಗರಿಗೆ ತೆಂಗಿನಕಾಯಿಯನ್ನು ಒಡೆದು ತಿನ್ನುವಷ್ಟು ಕಷ್ಟವೂ ಅಲ್ಲ. ದ್ರಾಕ್ಷಿಯ ಹಣ್ಣನ್ನು ಚಪ್ಪರಿಸಿದಂತೆ ಸುಲಭವೂ ಅಲ್ಲ. ಬಾಳೆಯ ಹಣ್ಣನ್ನು ಸುಲಿದು ತಿಂದಂತೆ ಕಷ್ಟಸುಲಭವಾಗಿವೆ. ಆದುದರಿಂದಲೇ ಕನ್ನಡದಲ್ಲಿ ಮುಂದೆ ಪ್ರಸಿದ್ಧರಾದ ಭೀಮಕವಿ, ಚಾಮರಸ, ವಿರೂಪಾಕ್ಷ ಪಂಡಿತ, ಲಕ್ಷ್ಮೀಶ, ಕುಮಾರವ್ಯಾಸ ಮೊದಲಾದ ಮಹಾಕವಿಗಳೆಲ್ಲರೂ ರಾಘವಾಂಕನ ಸುಲಭ ಸುಂದರವಾದ ಶೈಲಿಯಲ್ಲಿಯೇ ತಮ್ಮ ಗ್ರಂಥಗಳನ್ನು ಬರೆದು ಲೋಕೋಪಕಾರ ಮಾಡಿದ್ದಾರೆ. ಹಾಗೂ ಜನಪ್ರಿಯರಾಗಿದ್ದಾರೆ.

ಇವನ ಕಾವ್ಯದಲ್ಲಿ ಆಗಿನ ಕಾಲದಲ್ಲಿ ಜನರ ಬಳಕೆಯಲ್ಲಿದ್ದ ನಾಣ್ನುಡಿಗಳು ಹೆಚ್ಚಾಗಿ ಸೇರಿವೆ. ಶೈಲಿಯಲ್ಲಿ ಕನ್ನಡ ಸಂಸ್ಕೃತ ಶಬ್ದಗಳು ಹದವರಿತು ಬಂದಿವೆ. ಉತ್ಪ್ರೇಕ್ಷೆ, ಶ್ಲೇಷೆ ಮೊದಲಾದ ಅಲಂಕಾರಗಳು ಕಡಮೆಯಾಗಿ ದೃಷ್ಟಾಂತ, ಸ್ವಭಾವೋಕ್ತಿ, ಉಪಮೆ ಮೊದಲಾದ ಅಲಂಕಾರಗಳು ಹೆಚ್ಚಾಗಿವೆ. ಮುಖ್ಯವಾಗಿ ರಾಘವಾಂಕನು ತನ್ನ ಕಾವ್ಯಗಳಿಂದ ಕೇವಲ ರಾಜಾಸ್ಥಾನಗಳನ್ನು ಮೆಚ್ಚಿಸುವ ಧ್ಯೇಯವನ್ನಿಟ್ಟುಕೊಳ್ಳದೆ, ಜನ ಸಾಮಾನ್ಯದ ಏಳಿಗೆಯ ದೃಷ್ಟಿಯನ್ನೂ ಇಟ್ಟುಕೊಂಡು ಬರೆದನೆಂಬುದಕ್ಕೆ ಅವನು ಕೈಗೊಂಡ ಷಟ್ಪದಿಶೈಲಿಯೇ ನಿದರ್ಶನವಾಗಿದೆ. ರಾಘವಾಂಕನು ಪ್ರಾಚೀನಕನ್ನಡ ಸಾಹಿತ್ಯದಲ್ಲಿ ಹೊಸ ಮಾರ್ಗವನ್ನು ಕಂಡುಹಿಡಿದ ಹಾಗೂ ಕ್ರಾಂತಿಕಾರಕನಾದಕವಿಯೆಂದು ಹೇಳಬಹುದು.

## ಕವಿಯ ಕಾಲ

ರಾಘವಾಂಕನ ಕಾಲ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳು ಬಹಳವಾಗಿವೆ. ಡಾ॥ ಕಿಟೆಲ್ ಕ್ರಿ. ಶ. ೧೨೯೦, ಶ್ರೀ ಆರ್. ನರಸಿಂಹಾಚಾರ್ ಕ್ರಿ. ಶ. ೧೧೬೫, ಡಾ॥ ವೆಂಕಟಸುಬ್ಬಯ್ಯ ಕ್ರಿ. ಶ. ೧೨೮೦, ಪ್ರೊ॥ ಕುಂದಣಕಾರ್ ೧೨೧೬ ಶ್ರೀ ಗೋವಿಂದ ಪೈ. ಕ್ರಿ. ಶ. ೧೧೬೦ ರಿಂದ ೧೨೦೦, ಶ್ರೀ ಈ. ಪಿ. ರೈಸ್ ಕ್ರಿ. ಶ. ೧೧೪೧ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರೀ ಕ್ರಿ. ಶ. ೧೨೪೦, ಶ್ರೀ ಡಿ. ಎಲ್. ನರಸಿಂಹಾಚಾರ್ ಕ್ರಿ. ಶ. ೧೧೪೫–೧೨೪೫, ಶ್ರೀ ಲೂಯಿ ರೈಸ್ ಕ್ರಿ. ಶ. ೧೩೦೦ ಶ್ರೀ.ಎಂ. ರಾಮಾನುಜೈಯ್ಯಂಗಾರ್ ಕ್ರಿ. ಶ. ೧೧೬೫ ಕ್ಕೆ ಹಿಂದೆ, ಕೈ॥ ಮಾಗಡಿ ವೀರಪ್ಪ ಶಾಸ್ತ್ರಿಗಳು ಕ್ರಿ. ಶ. ೧೫೦೦. ಈ ಮೇಲೆ ಹೇಳಿದ ಅಭಿಪ್ರಾಯಗಳು ಎಷ್ಟೊಂದು ಭಿನ್ನಾಭಿಪ್ರಾಯಗಳಿಂದ ಕೂಡಿವೆಯೆಂಬುದು ಓದುಗರಿಗೆ ಸ್ಪಷ್ಟವಾಗುವಂತಿದೆ. ನಮ್ಮ ಅಭಿಪ್ರಾಯದಲ್ಲಿ ಕನ್ನಡ ಕವಿಚರಿತ್ರೆಕಾರರ ಅಭಿಪ್ರಾಯವೂ ಮಾನ್ಯ ಗೋವಿಂದ ಪೈ ರವರ ಅಭಿಪ್ರಾಯವೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಆಗಿ ತೋರುವುದರಿಂದಲೂ, ರಾಘವಾಂಕನ ಜೀವನ ಚರಿತ್ರೆಯನ್ನು ಚೆನ್ನಾಗಿ ಪರಿಶೀಲಿಸುವುದರಿಂದ ಉಂಟಾದ ಅನುಭವದಿಂದಲೂ ಕ್ರಿ. ಶ. ೧೧೬೦ ರಿಂದ ೧೨೦೦ ರ ವರೆಗೆ ರಾಘವಾಂಕನ ಜೀವನ ಕಾಲ ಆಗಿರಬಹುದೆಂದು ತೋರಿಬಂದಿವೆ.

## ಕವಿಯ ಮತ

ರಾಘವಾಂಕನು ವೀರಶೈವನೆಂಬುದಕ್ಕೆ ಅವನ ಕಾವ್ಯಗಳಲ್ಲಿ ಬೇಕಾದಷ್ಟು ನಿದರ್ಶನಗಳಿವೆ. ಆದರೂ ಕೆಲವು ವಿದ್ವಾಂಸರು ಇವನು ವೀರಶೈವನಲ್ಲವೆಂದು ವಾದಿಸುತ್ತಿರುವುದು ಆಶ್ಚರ್ಯಕರವಾಗಿದೆ. ಶಿವಾಧಿಕ್ಯವನ್ನು ಸಾರುವ, ಶಿವಶರಣರನ್ನು ಹೊಗಳುವ, ಕೇವಲ ವೀರಶೈವಕವಿಗಳಿಂದ ಮಾತ್ರ ಶ್ಲಾಘಿಸಲ್ಪಟ್ಟಿರುವ ಈ ಕವಿಯು ವೀರಶೈವನಲ್ಲದೆ ಮತ್ತಾರು? ರಾಘವಾಂಕನ ಲಿಂಗವಂತಿಕೆಗೆ ಹೆಜ್ಜೆ ಹೆಜ್ಜೆಗೆ ನಿದರ್ಶನಗಳಿವೆ. ಈಗ ಒಂದೆರಡನ್ನು ಮಾತ್ರ ಗಮನಿಸೋಣ.

ಸೋಮನಾಥ ಚರಿತೆಯಲ್ಲಿ ಪಾರಿಸ ಶೆಟ್ಟಿಯ ಮಗಳಾದ ಪದ್ಮಾವತಿಗೆ ಓಜೇಶ್ವರದ ಆಚಾರ್ಯರಿಂದ ಲಿಂಗಧಾರಣ ಮಾಡಿಸಿ, ಆದಿಶೆಟ್ಟಿಗೆ ಮದುವೆ ಮಾಡಿಸುವುದು, ವೀರೇಶ ಚರಿತೆಯಲ್ಲಿ ದಕ್ಷನ ಯಾಗಶಾಲೆಯನ್ನು ಹೊಲೆಗೇರಿಗೆ ಹೋಲಿಸುವುದು ಇತ್ಯಾದಿ ಸಂದರ್ಭಗಳು ರಾಘವಾಂಕನ ಲಿಂಗವಂತಿಕೆಗೆ ಪ್ರಬಲವಾದ ಸಾಕ್ಷಿಗಳಾಗಿವೆ. ಲಿಂಗಧಾರಣವೂ ಯಜ್ಞವಿರೋಧವೂ ಕವಿಯಲಿಂಗವಂತಿಕೆಗೆ ಹೆಗ್ಗುರುತುಗಳು.

## ಕೆಲವು ಮುಖ್ಯ ಸಂಗತಿಗಳು.

ರಾಘವಾಂಕನು ಹಂಪೆಯ ದೇವರಾಯ, ಓರುಂಗಲ್ಲಿನ ಪ್ರತಾಪರುದ್ರ ಮಹಾರಾಜ, ಬೇಲೂರಿನ ಬಲ್ಲಾಳರಾಯ ಇವರುಗಳ ಆಸ್ಥಾನದಲ್ಲಿ ಗೌರವಾನ್ವಿತನಾದನು,

ಬೇಲೂರಿನಲ್ಲಿ ಕೆರೆಯ ಪದ್ಮರಸನಿಂದ ತತ್ತೋಪದೇಶವನ್ನು ಹೊಂದಿ ತನ್ನ ಜೀವಿತದ ಕಡೆಗಾಲವನ್ನು—ಹರಿಹರನ ಅಪ್ಪಣೆನಿಡಿದು—ಬೇಲೂರಿನಲ್ಲಿಯೇ ಗುರು ಪದ್ಮರಸನ ಸನ್ನಿಧಿಯಲ್ಲಿ ಕಳೆದನು. ಬೇಲೂರಿನಲ್ಲಿಯೇ ಅವನು ಸಮಾಧಿಸ್ಥನಾದನು.

ಬೇಲೂರಿನಲ್ಲಿ ಪದ್ಮರಸನಿಗೂ ತ್ರಿಭುವನ ತಾತನಿಗೂ ನಡೆದ ವಾದದಲ್ಲಿ ಗುರು ಪದ್ಮರಸನ ಪಕ್ಷವನ್ನು ವಹಿಸಿದ್ದನು. ಓರುಂಗಲ್ಲಿನಲ್ಲಿ ವಿದ್ಯಾಮದದಿಂದ ಕೂಡಿದ್ದ ಏಕಸಂಧಿಗ್ರಾಹಿ, ದ್ವಿಸಂಧಿಗ್ರಾಹಿ ಎಂಬ ಪಂಡಿತರ ಗರ್ವಭಂಗ ಮಾಡಿದನು. ಪಂಪಾ ವಿರೂಪಾಕ್ಷನನ್ನು ತನ್ನ ಭಕ್ತಿಸಾಮರ್ಥ್ಯದಿಂದ ಸಾಕ್ಷಾತ್ಕಾರ ಮಾಡಿಕೊಂಡನು. ಇತ್ಯಾದಿ ವಿಚಾರಗಳು ಕವಿಯ ಜೀವನ ಚರಿತ್ರೆಯಲ್ಲಿ ನೆನೆಸಿದತಕ್ಕ ಸಂಗತಿಗಳಾಗಿವೆ. ಬೇಲೂರಿನಲ್ಲಿ ಕವಿಯ ಸಮಾಧಿ ಈಗಲೂ ಇದೆ.

## ವೀರೇಶ ಚರಿತೆ

ರಾಘವಾಂಕನ ವೀರೇಶ ಚರಿತೆಗೆ ಆಧಾರಗ್ರಂಥವು ಮಹಾಕವಿ ಹರೀಶ್ವರನ ರಘಟಾಪ್ರಬಂಧದಲ್ಲಿರುವ ವೀರಭದ್ರದೇವನರಗಳೆ. ಗುರು ಹರಿಹರನು ಲಲಿತರಗಳೆಯಲ್ಲಿ ಬರೆದ ವೀರಭದ್ರನ ಚರಿತ್ರೆಯನ್ನು, ಶಿಷ್ಯ ರಾಘವಾಂಕನು ಉದ್ದಂಡ ಷಟ್ಪದಿಯಲ್ಲಿ ಬರೆದಿದ್ದಾನೆ. ಈ ಕಾವ್ಯದಲ್ಲಿ ೧೨೭ ಪದ್ಯಗಳಿವೆ. ಎರಡು ಸಂಧಿಗಳಿವೆ. ಶಿವದ್ವೇಷಿಯಾಗಿ ಯಾಗವನ್ನು ನಡೆಸುತ್ತಿದ್ದ ದಕ್ಷಬ್ರಹ್ಮನನ್ನು ಪರಶಿವನ ಹಣೆಗಣ್ಣಿನಲ್ಲಿ ಹುಟ್ಟಿದ ವೀರಭದ್ರನು ನಾಶಮಾಡಿದ ಕತೆಯು ಚಿತ್ರಿತವಾಗಿದೆ. ಈ ಕಥೆಯು ಸ್ಕಾಂದಪುರಾಣ, ಶಿವಪುರಾಣ, ವಾಯುವೀಯಸಂಹಿತೆ, ಲಿಂಗ ಪುರಾಣ, ಭಾರತ ಮತ್ತು ಭಾಗವತಾದಿ ಪ್ರಾಚೀನ ಪುರಾಣಗಳಲ್ಲಿ ಅಭಿವರ್ಣಿತವಾಗಿದೆ. ಕಥಾ ವಸ್ತುವು ಸ್ಕಾಂದಾದಿ ಪುರಾಣಗಳಿಂದ ಸಂಗ್ರಹಿಸಲ್ಪಟ್ಟಿದು. ಮೊದಲು ಇದನ್ನು ಕನ್ನಡದಲ್ಲಿ ಬರೆದವನು ಹರಿಹರನು. ಅನಂತರ ಅದನ್ನು ಷಟ್ಪದಿಯ ಶೈಲಿಯಲ್ಲಿ ರಚಿಸಿದವನು ರಾಘವಾಂಕನು. ಮುಂದೆ ಕವಿವೀರಭದ್ರ ರಾಜನು (ಕ್ರಿ. ಶ. ೧೫೩೦) 'ವೀರಭದ್ರವಿಜಯ' ಎಂಬ ಗ್ರಂಥವನ್ನು ಚಂಪೂ ಶೈಲಿಯಲ್ಲಿ ರಚಿಸಿರುವುದು ಸರ್ವಶ್ರುತವಾಗಿದೆ. ವೀರೇಶ್ವರಚರಿತೆಯ ಛಂದಸ್ಸು ಇದು ವರೆಗೆ ಕನ್ನಡಿಗರಿಗೆ ಪರಿಚಯವಿಲ್ಲದುದಾಗಿದೆ. ಈ ಷಟ್ಪದಿಯ ೧-೨-೪-೫ ನೇ ಪಾದಗಳಲ್ಲಿ ೪ ಮಾತ್ರೆಯ ೫ ಗಣಗಳೂ, ೩ ಮತ್ತು ೬ ನೆಯ ಪಾದಗಳಲ್ಲಿ ೪ ಮಾತ್ರೆಯ ೮ ಗಣಗಳೂ ಬರುತ್ತವೆ. ಪದ್ಯಗಳನ್ನು ಓದುವಾಗ ಒಂದು ಬಗೆಯ ಗತಿಯೂ, ಆವೇಶವೂ, ಸ್ಫೂರ್ತಿಯೂ ಉಂಟಾಗುತ್ತದೆ. ಮುಖ್ಯವಾಗಿ ಇದು ವೀರರ ದೇವತೆಯಾದ ವೀರಭದ್ರನಿಗೆ ಅನುಗುಣವಾದ ಶೈಲಿಯೆಂದು ಹೇಳಬಹುದು. ಕವಿಯು ಈ ಗ್ರಂಥಕ್ಕೆ 'ವೀಸಲು ಕವಿತೆ' ಎಂಬ ಮತ್ತೊಂದು ಹೆಸರಿಟ್ಟಿದ್ದಾನೆ. ಪ್ರಾಚೀನ ವೀರಶೈವ ಗ್ರಂಥಗಳಲ್ಲಿ ಇದನ್ನು 'ಕವಿಮುಖ ಕವಾಟಶಾಸ್ತ್ರ, ಎಂದು

ಹೇಳಿದೆ. ರಾಘವಾಂಕನು ಷಟ್ಪದಿಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತಿದ್ದನೆಂಬುದಕ್ಕೆ ಈ ಗ್ರಂಥವು ನಿದರ್ಶನವಾಗಿದೆ. ಈ ಗ್ರಂಥದ ನಾಂದೀ ಪದ್ಯವು ಹರಿಶ್ಚಂದ್ರ ಕಾವ್ಯದ ನಾಂದಿ ಪದ್ಯವನ್ನು ಬರೆಯಲು ಮೊದ ಮೊದಲ ಪ್ರಯತ್ನವೆಂಬಂತಿದೆ.

ವೀರೇಶಚರಿತೆಯ ಛಂದಸ್ಸಿಗೆ ದಂಡಿನ ಶಿಬಿರದ ಪ್ರತಿಯಲ್ಲಿ 'ವಿಳಾಸಲುಕವಿತೆ' ಎಂದೂ, ರಾಯಚೂರು ಪ್ರತಿಯಲ್ಲಿ 'ಉದ್ದಂಡಷಟ್ಪದಿ' ಎಂದೂ ಹೇಳಿದೆ. ಹಿಂದಿನ ನಾಗವರ್ಮನ ಛಂದಸ್ಸು ಹಿಡಿದು, ಇಂದಿನ ಕನ್ನಡಕೈಪಿಡಿಯವರೆಗೆ ಯಾವ ಕನ್ನಡ ಛಂದೋಗ್ರಂಥದಲ್ಲಿಯೂ 'ಉದ್ದಂಡಷಟ್ಪದಿ' ಹೆಸರಿಲ್ಲ. ಷಟ್ಪದಿಗಳು ಆರು ಎಂಬುದೇ ಸರ್ವತ್ರ ಪ್ರಚಾರದಲ್ಲಿರುವ ಸಂಗತಿ. ಈಗ ವೀರೇಶಚರಿತೆ ಪ್ರಕಟವಾದ ಮೇಲೆ ಷಟ್ಪದಿಗಳು ಏಳುಬಗೆಯಾಗಿವೆ ಎಂಬುದು ತಿಳಿದುಬಂದಿತು.

ರಾಘವಾಂಕನಾದಮೇಲೆ ಈ ಉದ್ದಂಡ ಷಟ್ಪದಿಯಲ್ಲಿ ಯಾರೂ ಕಾವ್ಯಗಳನ್ನು ಬರೆದಂತೆ ತೋರುವುದಿಲ್ಲ. ಆದರೆ ರಾಘವಾಂಕ ಚರಿತೆಯನ್ನು ಬರೆದ ಹೂಲಿಯ ಕವಿ ಚಿಕ್ಕನಂಜಾಚಾರ್ಯನು ಮಾತ್ರ ತನ್ನ ಕಾವ್ಯದ ಸಂಧಿ ೧೯, ಪದ್ಯ ೪೨ರಲ್ಲಿ 'ಏಳು ಬಗೆಯ ಷಟ್ಪದಿಗಳು ಅಡಕವಾದ ವಾರ್ಧಕಷಟ್ಪದಿ' ಎಂದು ಹೇಳಿ ಒಂದುಪದ್ಯ ಬರೆದಿದ್ದಾನೆ. ಅಲ್ಲದೆ ಒಂದು ಉದ್ದಂಡ ಷಟ್ಪದಿಯನ್ನು ವಿರಚಿಸಿದ್ದಾನೆ. ಅದ್ದರಿಂದ ಕವಿಚಿಕ್ಕನಂಜಾಚಾರ್ಯನಿಗೆ 'ಉದ್ದಂಡಷಟ್ಪದಿ' ಚೆನ್ನಾಗಿ ತಿಳಿದಿತ್ತೆಂದು ಹೇಳಬಹುದು.

'ಕೃತಿನಾಮಂ ವೀರೇಶ್ವರ ಚರಿತಂ, ಕೃತಿಯಂ ಮುದದಿಂ ಪೇಳ್ದವನು ಯತಿ ಪತಿ ಹಂಪೆಯ ಹರಿದೇವರ ಕಾರುಣ್ಯದ ಸುತ ಶಿವ ಕವಿ ಭೃತ್ಯಂ ಹಂಪೆಯ ರಾಘವ ಪಂಡಿತಂ' ಎಂದು ಕಾವ್ಯದ ಮತ್ತು ಕವಿಯ ಹೆಸರುಗಳನ್ನು ಸ್ಪಷ್ಟವಾಗಿ ಹೇಳಿದ್ದಾನೆ. (ಸಂ. ೧, ಪದ್ಯ ೮) ವಿಳಾಸಲುಗವಿತೆಯ ಚಿತ್ರೈಸುವುದು (ಸಂ. ೧, ಪದ್ಯ ೯) ಎಂಬಲ್ಲಿ ಈ ಗ್ರಂಥಕ್ಕೆ 'ವಿಳಾಸಲು ಕವಿತೆ' ಎಂಬ ಹೆಸರುಂಟೆಂಬುದನ್ನು ಕವಿ ಸ್ಪಷ್ಟಪಡಿಸಿದ್ದಾನೆ. 'ಕೆಂಡದ ತೊಡಿಗೆಗೆ ಮನವಿಟ್ಟ ರಗಿನ ಪುತ್ತಳಿಯಂತೆ' ಧರಣೀಶನ ಮುಗುಟದ ಮುತ್ತು...... ತಾಂ ಜನಿಸಿದ ಸಿಂಪಂ ಕಂಡಂತೆ; ಬೆಟ್ಟೇರಿಯೆ ಮೃತ್ಯುವ ಕರೆದಂತೆ; 'ಕನ್ನಡಿ ಕುಂದುವುದೇಂ ಕುರುಡಂ ಕಾಣದಿರಲ್ಕೆ' ಸುಟ್ಟಿಪ್ಪದ ಸುಡುವಂತೆ ಇತ್ಯಾದಿ ಪ್ರಯೋಗಗಳು ಈ ಕಾವ್ಯದ ಸ್ವಾರಸ್ಯವನ್ನು ಹೆಚ್ಚಿಸುವುವಲ್ಲದೆ ಕವಿಯ ಲೋಕಾನುಭವಕ್ಕೆ ಮಿಗಿಲಾದ ನಿದರ್ಶನವಾಗಿವೆ. ಈಗ ವೀರೇಶಚರಿತೆಯಲ್ಲಿರುವ ದಕ್ಷ ಮತ್ತು ದಧೀಚಿ ಸಂವಾದ (ಸಂಧಿ ೧. ಪದ್ಯ ೪೬, ೪೭, ೪೮,) ವಿದಗ್ಧಮಂತ್ರಿ ಮತ್ತು ದಕ್ಷಬ್ರಹ್ಮ ಇವರ ಸಂವಾದ (ಸಂಧಿ ೧. ಪ. ೩೯, ೩೦, ೩೧,) ಭಾಗಗಳು ಕವಿಯ ನಾಟಕೀಯತೆಗೆ ನಿದರ್ಶನವಾಗಿವೆ. ಹರಿಶ್ಚಂದ್ರ ಕಾವ್ಯದಲ್ಲಿರುವಂತೆಯೇ ಇವರಲ್ಲಿಯೂ

ನಾಟಕೀಯತೆಯುಂಟು. ಮುಖ್ಯವಾಗಿ ವೀರೇಶಚರಿತೆಯು ಪ್ರಾಚೀನ ಕಾಲದ ಕವಿಗಳ ಒಂದು ಖಂಡಕಾವ್ಯಕ್ಕೆ ಒಳ್ಳೆಯ ನಿದರ್ಶನವೆಂಬಂತಿದೆ. ಕನ್ನಡ ಸಾಹಿತ್ಯ ಪ್ರೇಮಿಗಳ ಅವಗಾಹನೆಗೆ ಅರ್ಹವಾಗಿದೆ.

## ರಾಘವಾಂಕನ ಘನತೆ

ರಾಘವಾಂಕನು ಕೇವಲ ಕವಿಯೋ ಅಲ್ಲದೆ ಸವಾಡ ಪುರುಷನೂ ಆಗಿದ್ದನೆಂದು ಆತನ ಚರಿತ್ರೆಯಿಂದ ತಿಳಿದು ಬರುತ್ತದೆ. ಕ್ರಿ. ಶ. ೧೬೫೦ ರಲ್ಲಿದ್ದ ಬೆಳಗಾವಿ ಜಿಲ್ಲಾ ಹೂಲಿ ಪಂಚವಣ್ಣಿಗೆಯ ಮಠಾಧ್ಯಕ್ಷನಾಗಿದ್ದ ಚಿಕ್ಕನಂಜಾರ್ಯ ಎಂಬ ಕವಿಯು 'ರಾಘವಾಂಕ ಕಾವ್ಯಂ' ಎಂಬ ಗ್ರಂಥವೊಂದನ್ನು ಬರೆದು, ಕವಿ ರಾಘವನ ಹಿರಿಮೆಯನ್ನು ಲೋಕಕ್ಕೆ ಸಾರಿ ಹೇಳಿದ್ದಾನೆ. ಅಲ್ಲದೆ ಗುರುರಾಜ ಚಾರಿತ್ರ್ಯ, ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ, ಪದ್ಮರಾಜ ಪುರಾಣ, ಚೆನ್ನಬಸವ ಪುರಾಣ ಮೊದಲಾದ ಪ್ರಾಚೀನ ವೀರಶೈವ ಗ್ರಂಥಗಳಲ್ಲಿ ಈ ಕವಿಯ ಬಗ್ಗೆ ಹಲವು ಸ್ವಾರಸ್ಯವಾದ ವಿಷಯಗಳು ನಿರೂಪಿತವಾಗಿವೆ.

ಮಹಾಕವಿ ರಾಘವಾಂಕನು ಕವಿಚಕ್ರವರ್ತಿ ಹರಿಹರನ ಶಿಷ್ಯನೆನಿಸಿದುದು, ಹಂಪೆಯ ವಿರೂಪಾಕ್ಷನ ಸಾನ್ನಿಧ್ಯವನ್ನು ಪಡೆದುದು, ಗುರು ಪದ್ಮರಸನ ಅನುಗ್ರಹಕ್ಕೆ ಪಾತ್ರನಾದುದು, ಹಲವು ರಾಜಾಸ್ಥಾನಗಳಲ್ಲಿ ದಿಗ್ವಿಜಯವನ್ನು ಪಡೆದುದು, ಹರಿಶ್ಚಂದ್ರ ಕಾವ್ಯ ಮೊದಲಾದ ನವರಸದ ಮಡುವಿನಂತಹ ಕಾವ್ಯಗಳನ್ನು ವಿರಚಿಸಿದುದು, ಅಜನ್ಮ ಪರ್ಯಂತ ನೈಷ್ಠಿಕ ಬ್ರಹ್ಮಚರ್ಯವನ್ನು ಕೈಗೊಂಡುದು, ಕನ್ನಡ ಸಾಹಿತ್ಯದ ಸೇವೆಗೂ, ವೀರಶೈವ ಧರ್ಮ ಪ್ರಚಾರಕ್ಕೂ ತನ್ನ ಆಯುಷ್ಯವನ್ನು ವಿನಿಯೋಗಿಸಲು ಮಾಡಿದುದು, ಕಡೆಗೆ ಬೇಲೂರಿನಲ್ಲಿ ಗುರು ಪದ್ಮರಸನ ಸನ್ನಿಧಿಯಲ್ಲಿ ಜೀವಂತಸಮಾಧಿಯನ್ನು ಪಡೆದುದು ಇತ್ಯಾದಿ ವಿಷಯಗಳು ಮಹಾತ್ಮನೂ ಮಹಾಕವಿಯೂ ಆದ ರಾಘವಾಂಕನ ಘನತೆಗೆ ಸುಸ್ಪಷ್ಟವಾದ ನಿದರ್ಶನವಾಗಿವೆ.

## ವೀರಭದ್ರದೇವರ ರಗಳೆ.

'ವೀರಭದ್ರದೇವರ ರಗಳೆ' ಎಂಬ ಕಾವ್ಯವನ್ನು ಬರೆದವನು ಹಂಪೆಯ ಹರೀಶ್ವರನು. ಇವನು ರಾಘವಾಂಕನ ಗುರುವೆಂಬುದು ಪ್ರಸಿದ್ಧವಾಗಿಯೇ ಇದೆ. ರಾಘವಾಂಕನು ವೀರೇಶಚರಿತೆ (ಸಂ ೧. ಪದ್ಯ. ೮) ಯಲ್ಲಿ "ಯತಿಪತಿ ಹಂಪೆಯ ಹರಿದೇವರ ಕಾರುಣ್ಯದ ಸುತ ಶಿವಕವಿಭೃತ್ಯಂ ಹಂಪೆಯ ರಾಘವಪಂಡಿತಂ" ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

ಹರಿಹರ ರಾಘವಾಂಕರು ಗುರುಶಿಷ್ಯರು ಹಾಗೂ ಸಮಕಾಲೀನರು. ಇವರ ಕಾಲ ಮತ್ತು ಮತ ವಿಚಾರಗಳ ಬಗ್ಗೆ ಹಲವು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಈ ಉಭಯರೂ ವೀರಶೈವರೆಂದೂ ಸು. ಕ್ರಿ. ಶ. ೧೧೪೫ ರಿಂದ ಕ್ರಿ. ಶ. ೧೨೨೬ ರರ ಮಧ್ಯಕಾಲದಲ್ಲಿ ಜೀವಿಸಿದ್ದರೆಂದೂ ನಿರ್ಧರವಾಗಿದೆ.

ಹರೀಶ್ವರನು ಕನ್ನಡದಲ್ಲಿ ಗಿರಿಜಾಕಲ್ಯಾಣ, ರಕ್ಷಾಶತಕ, ಪಂಪಾಶತಕ, ವಿರೂಪಾಕ್ಷಶತಕ, ಮುಡಿಗೆಯ ಅಷ್ಟಕ, ಶಿವಶರಣರ ನೂರೆಂಟು ರಗಳೆಗಳುಳ್ಳ 'ರಘಟಾ ಪ್ರಬಂಧ' ಎಂಬ ಕಾವ್ಯಗಳನ್ನು ಬರೆದಿದ್ದಾನೆ. ಹರಿಹರನು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆದಿರಬಹುದೆಂಬ ಅನುಮಾನವಿದೆ. 'ಕವಿಚಕ್ರವರ್ತಿ' ಎಂಬ ಬಿರುದನ್ನು ಸಮಕಾಲದಲ್ಲಿ ಧರಿಸಿದ ಕವಿ ಸಂಸ್ಕೃತಕವಿಯೂ ಆಗಿರಬೇಕು. ಹರಿಹರನು ಕನ್ನಡ ಜಾಣನಾದಂತೆ ಸಂಸ್ಕೃತ ಪ್ರವೀಣನೂ ಅಹುದು.

ವೀರಭದ್ರದೇವರ ರಗಳೆಯಲ್ಲಿ ೩೮೫ ಸಾಲುಗಳೂ, ಎರಡು ಕಂದಗಳೂ ಇವೆ. ಇದು 'ಲಲಿತರಗಳೆ' ಯ ಛಂದಸ್ಸಿನಲ್ಲಿ ರಚಿತವಾಗಿದೆ. ರಗಳೆಯ ಕವಿಯಾದ ಹರಿಹರನ ರಗಳೆಗಳ ಮಾಧುರ್ಯವನ್ನು ಓದಿಯೇ ತಿಳಿಯುವುದೊಳ್ಳೆಯದು.

ರಾಘವಾಂಕನ ವೀರೇಶಚರಿತೆಗೆ ಮೂಲ ಈ "ವೀರಭದ್ರದೇವರ ರಗಳೆ" ಎಂಬುದು ಸ್ಪಷ್ಟವಾಗಿಯೇ ಇದೆ. ಮಾವನಾದ ಹರಿಹರನ ಹಲವು ಪದ, ಭಾವಗಳನ್ನು, ಅಳಿಯನಾದ ರಾಘವಾಂಕನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾನೆ. ಇದು ಸಹಜವಾಗಿಯೇ ಇದೆ.

ಹರಿಹರನು ವೀರಶೈವ ಕವಿಗಳಲ್ಲಿ ಪ್ರಬಲನೂ ಪ್ರಾಚೀನನೂ ಎನಿಸಿದ್ದಾನೆ. ಪ್ರಸಿದ್ಧಕವಿ ಷಡಕ್ಷರದೇವನು "ಹರಿಹರ ನುದಿತಮಾರ್ಗದಿಂದಿದಿನೊರೆವೆಂ (ರಾ. ವಿ. ಆ, ೧. ಪ. ೭೯) ಎಂದು ಹೇಳಿ ಹರಿಹರನಿಗೆ ತಲೆಬಾಗಿದ್ದಾನೆ. ಅಲ್ಲದೆ ಅದೇ ಕವಿಯು ತನ್ನ 'ಕವಿಕರ್ಣರಸಾಯನಮ್' ಎಂಬ ಸಂಸ್ಕೃತ ಕಾವ್ಯದಲ್ಲಿ (ಪ. ೧. ಶ್ಲೋ ೧೪) ಹರೀಶ್ವರಸ್ತೇನ ಸಮಃ ಕವಿಃ ಕಃ ? ಅಂದರೆ ಹರಿಹರನಿಗೆ ಸಮನಾದ ಕವಿಯಾರು ಎಂದು ಪ್ರಶ್ನಿಸಿ ಹರಿಹರನ ಹಿರಿಮೆಯನ್ನು ಹೆಮ್ಮೆಯಿಂದ ಹೇಳಿದ್ದಾನೆ.

ಮುಖ್ಯವಾಗಿ ಕನ್ನಡ ಸಾಹಿತ್ಯದಲ್ಲಿ ಹರಿಹರನೂ ಅಂತೆಯೇ ರಾಘವಾಂಕನೂ ಅನ್ಯಾದೃಶ ಕವಿಗಳೆಂದೂ, ಹೊಸಮಾರ್ಗದ ಕವಿಗಳೆಂದೂ, ಕ್ರಾಂತಿಕಾರಕ ಕವಿಗಳೆಂದೂ, ಪ್ರತಿಭಾನ್ವಿತ ವಿದ್ವಾಂಸರೆಂದೂ ನಾವು ಹೇಳಬಹುದಾಗಿದೆ.

ಹರಿಹರನು ಪಂಪಾಕ್ಷೇತ್ರದಲ್ಲಿ ಹುಟ್ಟಿ ಬಳೆದವನು. ಸುಪ್ರಸಿದ್ಧವಾದ ಹಂಪೆಯ ಶಂಕರ ಪ್ರಭುವಿನ ಗುರುಪರಂಪರೆಯಲ್ಲಿ ಬಂದವನು. ನೈಷ್ಠಿಕ ಬ್ರಹ್ಮಚರ್ಯವನ್ನು ಅನುಸರಿಸಿದವನು. ಕಾವ್ಯ ಸಮಾಧಿಯಲ್ಲಿ ಆನಂದ ಸಾಕ್ಷಾತ್ಕಾರವನ್ನು ಪಡೆದವನು. "ಪಂಪಾಪತಿಯ ಸಾಕ್ಷಾತ್ಸುಪುತ್ರಂ" ಎಂದು ಹೇಳಿಕೊಳ್ಳುವಷ್ಟು ಶಿವಭಕ್ತಿ ಸಂಪತ್ತಿನಿಂದ ಕೂಡಿದವನು. ತನ್ನ ಯೋಗಶಕ್ತಿಯಿಂದಲೂ, ಶಿವಭಕ್ತಿಯ ಮಹಾತ್ಮೆಯಿಂದಲೂ ಹಲವು ಪವಾಡಗಳನ್ನು ಮೆರೆದವನು. ಶಿವಶರಣರ ಮಹಿಮೆಯನ್ನು ಲೋಕದಲ್ಲಿ ಹಬ್ಬಿಸುವ ಜೀವನ ವ್ರತವುಳ್ಳವನು. ತನ್ನಂತೆಯೇ ಪ್ರಸಿದ್ಧನಾದ ಶಿಷ್ಯ

ನನ್ನು ಪಡೆದವನು. ಇಂತಹ ಭಾಗ್ಯ ಪರಂಪರೆಯಿಂದ ಕೂಡಿದ ಕವಿಯ ಕವಿತೆಯೂ ಗ್ರಂಥಗಳೂ ಪ್ರಸಾದಿಕ ಶಕ್ತಿಯಿಂದ ಕೂಡಿರುವುದರಲ್ಲಿ ಆಶ್ಚರ್ಯವೇನು?

ಹರಿಹರನು ಹಳೆಯ ಬೀಡಿನಲ್ಲಿ (ಕ್ರಿ. ಶ. ೧೧೪೧. ೧೧೭೩) ವರೆಗೆ ಆಳುತ್ತಿದ್ದ ನರಸಿಂಹ ಬಲ್ಲಾಳನ ಆಸ್ಥಾನದಲ್ಲಿ ಕರಣಿಕರ ಕುಲತಿಲಕನಾಗಿದ್ದನು. ಅದೇ ಕಾಲದಲ್ಲಿ ಕೆರೆಯ ಪದ್ಮರಸನು ಬಲ್ಲಾಳನ ಮುಖ್ಯಮಂತ್ರಿಯಾಗಿದ್ದನು ಎಂದು ತಿಳಿದು ಬಂದಿದೆ. 'ಕೆರೆಯಪದ್ಮರಸನು' ಕನ್ನಡದಲ್ಲಿ ದೀಕ್ಷಾಬೋಧೆ ಎಂಬ ಕಾವ್ಯವನ್ನು ಬರೆದಿದ್ದಾನೆ. ಇವನ ಮಗನಾದ ಕುಮಾರ ಪದ್ಮರಸನು ತನ್ನ ತಂದೆಯು ಸಂಸ್ಕೃತ ಭಾಷೆಯಲ್ಲಿ ಬರೆದ ಸಾನಂದಚರಿತ್ರೆಯನ್ನು ಕನ್ನಡ ಷಟ್ಪದಿ ಶೈಲಿಯಲ್ಲಿ ಬರೆದಿದ್ದಾನೆ. ಹರಿಹರನಿಗೆ ರಗಳೆಯಲ್ಲಿ ಕಾವ್ಯವನ್ನು ಬರೆಯಲು .ಕೆರೆಯ ಪದ್ಮರಸನೂ ರಾಘವಾಂಕನಿಗೆ ಷಟ್ಪದಿಗಳಲ್ಲಿ ಕಾವ್ಯಗಳನ್ನು ಬರೆಯಲು ಕುಮಾರ ಪದ್ಮರಸನೂ ಮಾರ್ಗದರ್ಶಕರಾಗಿರಬಹುದೇ ಎಂದು ಹಲವರು ತರ್ಕಿಸುತ್ತಾರೆ.

'ದೀಕ್ಷಾ ಬೋಧೆ' ಮತ್ತು 'ಸಾನಂದ ಚರಿತೆಗಳು' ಪ್ರಕಟವಾದರೆ ಈ ಬಗ್ಗೆ ವಿಚಾರ ವಿಮರ್ಶೆ ನಡೆಯಲು ಹೆಚ್ಚು ಸಹಾಯವಾಗುತ್ತದೆ. ಶ. ಸಾ. ಗ್ರಂ. ಮಾ. ಯಲ್ಲಿಯೇ ಮೇಲಿನ ಗ್ರಂಥಗಳನ್ನು ಪ್ರಕಟಿಸಬೇಕೆಂಬ ಬಯಕೆಯಿದೆ.

—ಸಂಪಾದಕ.



### ಉದ್ದಂಡ ಷಟ್ಪದಿ

ಗುರುಭಕ್ತಿಯನಿಧಿ ನೀತಿಯ ನೆಲೆಮನೆ ಕೀರ್ತಿಯ
ತರು ಮೋಕ್ಷದ ಪುತ್ತಳಿ ಸುರಚಿರ ಕವಿತಾಸುಂ
ದರಿವಲ್ಲಭ ನೂತನ ಕರ್ಣಾಟಕ ಕವಿಶೇಖರ ನಿರುಪಮ ಪಂಡಿತನು ॥
ಪರತರ ಹಂಪೆಯ ಪಾವನಯತಿವರ ಹರಿಹ(?)
ವರಸುತ ಪುಣ್ಯಚರಿತ್ರನ ರಾಘವದೇವನ
ಚರಣದ್ವಯಮಿರಲೆನ್ನಯ ಹೃದಯಾಕಾಶದಿ ರವಿಶಶಿಗಳವೊಲ್ ನಿರುತಂ ॥

—ಶೂಲಪಾಣಿ



ರಾಘವಾಂಕನ ಇಷ್ಟದೇವತೆ ಪಂಪಾ ವಿರೂಪಾಕ್ಷ ದೇವಾಲಯದ ಒಂದು ದೃಶ್ಯ

# ವೀರೇಶ ಚರಿತೆ

## (ಮಿಾಸಲಗವಿತೆ)

ೂಚನೆ :

ಮೃಡನೋಲಗದೊಳ್ ಮನ್ನಣೆ ವಡೆಯದೆ ದಕ್ಷಂ ।
ಕಡುಮುಳಿಸಿಂ ಹರವಿರಹಿತ ಯಾಗವ ನಡಸಲ್ ।
ಘುಡಿಘುಡಿಸುತ ನಡೆತಂದು ದಧೀಚಿವ್ರತಿ
ಶಪಿಸಿದ ನಮರರ ಮುನಿಗಳನು ॥

ಉದ್ದಂಡ ಷಟ್ಪದಿ :

ಶ್ರೀಪತಿ ವಾಣೀಪತಿ ಸುರಪತಿ ದಿನಪತಿ ತಾ ।
ರಾಪತಿ ಮೊದಲಾದ ಸಮಸ್ತಾನತ ನೆನಿಸುವ ।
ಶ್ರೀಪಾದದ್ವಯ ನಕ್ಷಯ ನದ್ವಯ ನನುಪಮ
ನತಿಶಯರೂಪನು ಶಿವನು ॥
ಕೋಪಾಟೋಪದೆ ದಕ್ಷಾಧ್ವರ ವಿಧ್ವಂಸಾ ।
ಳಾಪದೆ ವೀರೇಶನನುದ್ಭವಿಸಿದ ಗುರು ಪಂ ।
ಪಾಪುರದರಸು ವಿರೂಪಾಕ್ಷಂ ಕೂರ್ತೆಮಗೀ
ಗಿಷ್ಟಾರ್ಥದ ಭಕ್ತಿಯನು ॥ ೧ ॥

ನಿಡುಜಡೆ ಯುಡುಕುಲ ಮಡಲೆಡೆಯೊಡೆಯೊಳ್ಪಡದೆಡೆ ।
ಯಿಡುವೊಲ್ಕಡಲಿನ ತಡಿವಿಡಿದುಡುಗಡಣದಪತಿ ।
ಯೊಡಲೊಡಕಿನ ಕಡುಹಿಮವಡಿಗಡಿಗಿಡದಡಸಲ್
ಕುಡಿಮರೆ ದಣ್ಣನೆ ದಣಿದು ॥
ಘುಡಿಘುಡಿಸುವ ಕೋಪದ ಕಡುಪೊಡೆಗಿಡೆ ಶಾಂತಿಯ ।
ಮಡುವೆನಿಸುವ ನಡುಗಣ್ಣಿನ ಕುಡಿವೆಳಗಿಂದೆಡೆ ।
ವಿಡಿದೊಪ್ಪುವ ನಗೆಮೊಗದೊಡೆಯಂ ಗುರು ಹಂಪೆಯ
ಮೃಡನೆಮ್ಮಂ ರಕ್ಷಿಸುಗೆ* ॥ ೨ ॥

* ರಾ. ಪ್ರ. ಎಂದುಂ ರಕ್ಷಿಸುಗೆ .

ಅಕ್ಷಯ ನಕ್ಷರ ನಕ್ಷಿತ್ರಯ ನುಕ್ಷಧ್ವಜ ।
ರಕ್ಷಾಪೇಕ್ಷುಕ್ಷೇಮಿ ಕ್ಷ್ವೇಡಾ ಕ್ಷೋಣಾ ।
ಧ್ಯಕ್ಷಾ ಭಕ್ಷಂ(?)ಕ್ಷುದ್ರ ಕ್ರೂರಂ ಕ್ಷಮನತಪಕ್ಷಂ
ಮೋಕ್ಷಪ್ರದನು ॥

ದಕ್ಷಾಪಕ್ಷಂ ಮಖಶಿಕ್ಷಂ ದಕ್ಷಂ ನಿಜ ।
ಕುಕ್ಷಿ ಸ್ಥಳ ನಿಕ್ಷಿಪ್ತ ಬ್ರಹ್ಮಾಂಡಂ ನೆರೆ ।
ರಕ್ಷಿಕ್ಕೆಮ್ಮಂ ಬಹುಳ ಕ್ಷತ್ರಂ ವಿಪುಳ ವಿಪಕ್ಷಂ
ವೀರೇಶ್ವರನು ॥ ೩ ॥

ಪರಿಣಾಮದಕಣಿ ಶಾಂತಿಯನಿಧಿ ಭಕ್ತಿಯಸಾ ।
ಗರ ಮೇಕೋನಿಷ್ಠೆಯಹರ ನತಿಸಾಮರ್ಥ್ಯದ ।
ತರು ನೀತಿಯಕಡಲು ದಯಾಗಾರಂ ಪುಣ್ಯದಪುಂಜಂ
ಸತ್ಯದಸದನಂ ॥
ಹರುಷದಮಡು ಸರ್ವಜ್ಞತ್ವದಶಾಸನ ಸು ।
ಸ್ಥಿರದಾಸ್ಥಲಯುಕ್ತಂ ಹಂಪೆಯ ಹರಿಹರದೇ ।
ವರ ಕಾರುಣ್ಯದಸುಪ್ರಭೆ ಬೆಳಗುಗೆ ಬಿಡದೆಮ್ಮ
ಮನೋಮಂದಿರಕೆಂದುಂ ॥ ೪ ॥

ಬಿಡೆ ಸಕಲಕ್ಕೆಬಲಂ ಬಗೆಗೆಂಟೊಡಲಾ ಎಂ ।
ಟೊಡಲಿಂಗೆ ಬಲಂ ರುದ್ರಂ ರುದ್ರಂಗೆ ಬಲಂ ।
ನಡುಗಣ್ಣಾ ನಡುಗಣ್ಣಿಂಗೆಬಲಂ ವೀರೇಶ್ವರನೆನ
ಲಾತನ ಬಲದಾ ॥
ಕಡುಸಂ ಬಣ್ಣಿಪೊಡುರಗೇಂದ್ರಂಗೆಣಿಸುವೆ ನೆಂ ।
ಬೊಡೆ ತರಣಿಗೆ ನೋಡುವಡಮರೇಂದ್ರಂ ಗರಿದೆನೆ ।
ತಡೆ ನಿನ್ನೆನ್ನಳವೇ ಶಿವಭಕ್ತರ ಕರುಣದೆ* ಬಲ್ಲಂದದಿ
ಪೊಗಳುವೆನು ॥ ೫ ॥

* ರಾ. ಪ್ರ. ಕೃಪೆಯಿಂ.

ನಾನಾರಸ ಭಾವಾರ್ಥಂ ಬಂಧ ಕಲಾ ಸಂ।
ಧಾನಂ ಸಂಧಿ ಸಮಾಸ ವಿಭಕ್ತಿಗಳೆಸೆವ ಭಿ।
ಧಾನ ಮಲಂಕಾರ ಪ್ರಕರಣ ಯತಿ ಧಾತು ಕ್ರಿಯೆ ಕಾರಕ
ನಿರ್ವಾಹ॥
ಸ್ಥಾನ ಪ್ರಕೃತಿ ಪ್ರತ್ಯಯ ಲಿಂಗತ್ರಯದೊಳ।
ಗೇನೆಡವಿದೊಡಂ ಪರರಣಕಿಸದಂತಾಲಿಪು।
ದಾನಂದದೊಳೆಲ್ಲಾ ಭಕ್ತರು ಕರುಣಿಸಿ ತಿರ್ದುವು
ದಾಂ ನಿಮ್ಮವನೆಂದು ॥ ೬ ॥

ಕಡುಗಲಸಿದ ಕದನದ ಕರ್ಕಶದನುಜನ ಬೆಂ।
ನೆಡಗನು ಬಗಿದದಱಿಂದೊಸರುವ ಬಿಸಿನೆತ್ತರ।
ಕುಡಿದಡಗನು ಕಾರಿದ ಹೆಚ್ಚಿನ ಮರುಳಾಟದ ಮರವಿಂ
ಲೋಕಂಗಳನು॥
ಹುಡಿಗೆಯ್ಯುತ್ತಿಹ ನರಸಿಂಹನ ಚಣೆಯಾಲಿಪಿ।
ತೊಡೆದಾ ವೀರೇಶನ ಲೀಲಾಕಥನವ ಪದ।
ವಿಡುವೆನು ಚಿತ್ತೈಸುವುದಪ್ರತಿಮ ಶಿವಾರ್ಚಕರೆರಡರಿಯದ
ನಿಚ್ಚಟರು ॥ ೭ ॥

ಕೃತಿನಾಮಂ ವೀರೇಶ್ವರ ಚರಿತಂ ಬಗೆಗೀ।
ಕೃತಿಪತಿ ಯೋರಂಗಲ್ಲಿನ ವೀರೇಶ್ವರನೀ।
ಕೃತಿಗೆ ಸಹಾಯರು ಸದ್ಭಕ್ತಸಮೂಹಂ ಕೃತಿಯಂ ಮುದದಿಂ
ಪೇಳ್ದವನು॥
ಯತಿಪತಿ ಹಂಪೆಯ ಹರಿದೇವರ ಕಾರುಣ್ಯದ।
ಸುತ ಶಿವಕವಿಭೃತ್ಯಂ ಹಂಪೆಯ ರಾಘವ ಪಂ।
ಡಿತ ನೆನಲೀ ಕೃತಿಯಂ ಮೆಚ್ಚದ ಸಜ್ಜನರಾರೀ ವಸುಧಾ
ಚಕ್ರದೊಳು ॥ ೮ ॥

ಕ್ಷಿತಿಯೊಳು ಶಿವಭಕ್ತರ್ಗೆ ಶಿವಂಗಾಂ ಮಾಱಿದ ।
ಮತಿಯೊಳ್ಮರೆ ದಜಗಿಜ ಹರಿಗಿರಿ ಸುರಪತಿ ಗಿರ ।
ಪತಿ ಮೊದಲಾದುಡುಕುಳಿದೇವರ ನವನೀಶರು ಮೊದಲೆನಿಸಿದ
ಭವಿಗಳನು ॥

ತುತಿಸಿದೆನಾದೊಡೆ ಸಲೆಶಿವದೂಷಕ ನಾನೆಂ ।
ಬತಿ ಬಿರುದಿನ ಶಿವಕವಿ ಹಂಪೆಯ ರಾಘವ ಪಂ ।
ಡಿತನೆನಲೀ ಮಿಾಸಲುಗವಿತೆಯ ಚಿತ್ರೈಸುವುದೆಱ
ಡಱಯದನಿಚ್ಚಟರು ॥ ೯ ॥

ಪರಿಕಿಪೊಡೀ ಕೃತಿಗಾವುದು ಮೊದಲೆನೆ ಹಳಚುವ ।
ತೆರೆಯೊಳು ತಿರುಗುವ ಕರಿಮಕರಂಗಳ ಪುಚ್ಛೋ
ತ್ಕರಹತಿಯಿಂ ಜೆಲ್ಲಿದಮಣಿಗಳಬೆಳಗಿಂ ಶ್ವೇತದ್ವೀಪವ
ನಣಕಿಸುತ ॥

ಶರನಿಧಿಯೊಪ್ಪುವುದಂತಾ ಶರನಿಧಿಪರಿವೃತ ।
ಧರೆಯೊಪ್ಪುವುದಂತಾ ಧರೆಯ ಶಿರೋಮಣಿಯೋ ।
ಲ್ಸುರಗಿರಿಯೊಪ್ಪುವುದಂತಾ ಸುರಗಿರಿಯುತ್ತರ ಭಾಗವನೇಂ
ಬಣ್ಣಿಪೆನು ॥ ೧೦ ॥

ಶಶಿಬಿಂಬದ ವೊಟ್ಟಲೊ ಬೆಳುದಿಂಗಳ ಘಟ್ಟಿಯೊ ।
ವಿಷಗೊರಲನ ಕೀರ್ತಿಲತಾಕಂದವೊ ಲೋಕ ।
ಪ್ರಸರದ ಕಂಗಳ ಮಂಗಳದೊಬ್ಬುಳಿಯೋ ಭಕ್ತರ
ಭಾಗ್ಯದ ಹೆಬ್ಬೆಳೆಯಾ ॥

ಹೊಸರಾಶಿಯೊ ವಸುಧೆಯಸಂತೆಯೋ ಎಂದಿರದಂ ।
ಕಿಸಿ ಮೆರೆದುದು ಕೈಲಾಸಂ ಶರ್ವನವಾಸಂ ।
ಲಸಿತಾಮರಕೋಶಂ ಮಾಯಾಸಂಕ್ಲೇಶಂ ಕುಧರಾಧೀಶಂ
ಕಡೆಗೈಯ್ಯಯ್ಯಾ (?) ॥ ೧೧ ॥

ಗಗನವ ಬಗಿದೆಲ್ಲಾ ಲೋಕಂಗಳನೆತ್ತಿಗೆ ।
ನಿಗುರುವ ಗಿರಿಮುಖ್ಯನ ಮಕುಟವೊ ಪೇಳೆಂದೆನ ।
ಲಗಣಿತ ರವಿಬಿಂಬಂಗಳ ಬೆಳಗಂ ಬೀರುತ್ತೆಸೆಯಿತ್ತ
ಭವನ ಭವನ ॥
ತೆಗೆ ಘಡ ಘಡ ಕುಡುಬೇಡುಪಮಾನವ ನೆನಲೋ ।
ಲಗಶಾಲೆ ಸುವರ್ಣದ ನವಮಣಿಗಳ ಪರಿಸದ ।
ಮೃಗಧರಕಾಂತದ ಚಿಂತಾರತ್ನದ ಭಿತ್ತಿಯೊಳೆಸೆಯಿತ್ತೇಂ
ಬಣ್ಣಿಪೆನು ॥೧೨॥

ವಿನುತಾವಾಸದ ನವಮಣಿಗಣಮಯ ಸಿಂಹಾ ।
ಸನದೊಳು ನೋಡುವ ಮಾತಾಡುವ ಕೈನೀಡುವ ।
ಸನುಮಾನಿಸಿ ಬಯಸಿದ ಸಲಿಸುತ್ತಿಹ ಕಲ್ಪದ್ರುಮವೆಂ
ದೆನಿಸುವ ಶಿವನು ॥
ತನತನ ಗೋಲಗದೊಳ್ನೆರದಿರ್ದೆಲ್ಲಾ ದೇ ।
ವನಿಕಾಯಂ ಪೊಗಳಲು ಮಂಗಳದರ್ಪಣದಂ ।
ತನುವರ್ತಿಸುತೊಪ್ಪಿದ ನಪ್ರತಿಮಂ ಸಕಲಚರಾಚರ
ಜನ್ಮಸ್ಥಳನು ॥೧೩॥

ನಡುಗಣ್ಣುರಿಬಿಸಿಲಿಂ ಬಳಲುವ ಶಶಿಗಮೃತವ ।
ನಿಡುವೊಲ್ಬಳುಕುವ ಚಮರಿಯ ಪೊಸಸೀಗುರಿಗಳು ।
ಜಡಿಯಲ್ಕುಡುಗುವ ಫಣಿಗಳಿಗಾಹುತಿಗೊಡುವಂತಿಹ
ವಿಜ್ಞನಸತಿಯರೆನೆ ॥
ತೊಡಿಗೆಯ ನಾನಾದೇವರ ತಲೆಗಳು ನಾಚಲು ।
ಪಿಡಿದೆತ್ತಿದ ಮುಕುರಂಗಳ ಕಡುಮನ್ನಣೆಗಳ ।
ಮಡದಿಯರೊಪ್ಪಿದರು ವಸಂತನನುಪಚರಿಸುತ್ತಿಹ
ವನದೇವಿಯರಂತೆ ॥೧೪॥

ಎಡಬಲದೊಳು ಕೈಮುಗಿದಿಪ್ಪ ಹರಿಬ್ರಹ್ಮರ ।
ನಡುವಣ ಸಾಲೋಕ್ಯರ ನಿಕರದ ಸಾಮೀಪ್ಯರ ।
ತೊಡೆಸೋಂಕಿನ ಸಾರೂಪ್ಯರ ಬೆರಸಿಹ ಸಾಯುಜ್ಯರ
ಸುತ್ತಣ ಗಣಕುಲದ ॥
ಕಡೆಗಂಗಳೊಳಾಡುವ ಸಿರಿಸರಸತಿಯರ ಸಾ ।
ಲ್ವಿಡಿದಿಹ ಸರ್ವಾಮರ ನಿಚಯದಮುಂದೆ ಥರಂ ।
ಬಿಡಿದಿಪ್ಪ ದಿಶಾಧಿಪರಂ ಬಳಸಿದ ಮನುಮುನಿತತಿಯಿಂ
ಸಭೆಯೊಪ್ಪಿದುದು ॥ ೧೫ ॥

ಸುತ್ತುಗೆ ಯೊತ್ತಂ ಬಡಿಯುತ್ತಿರ್ದ್ದ ಗಣಂಗಳ ।
ವೊತ್ತದ ಮಕುಟಂಗಳ ಕುತ್ತಾರಕ್ಕೆತ್ತಂ ।
ಹೊತ್ತು ತಳರ್ತಸಿಲತೆಗಳ ಕವಿದೆಡೆ ಗಿಡಿದಡಸಿದ
ದೀಪಾವಳಿ ಯೆಸೆವಾ ॥
ಭಿತ್ತಿಯ ಶಶಿಕಾಂತದ ತೊಡಿಗೆಯ ಸತಿಯರ ಸಂ ।
ಪತ್ತಿನ ಬೆಳತಿಗೆ ವೆಳಗಿನೊಳತಿ ಮಂಗಳಮಯ ।
ವೆತ್ತಿರ್ದಂ ಜಿತದೂಷಣ ನತಿಭೀಷಣ ನಘಶೋಷಣ
ನಹಿಭೂಷಣನು ॥ ೧೬ ॥

ಏಳಂಬುಧಿ ಪರಿವೃತದ ಧರಾತಳದೊಳಗೆ ನೃ ।
ಪಾಲರು ಗಳನವರಿವರೆಂದೆನ್ನದೆ ನೆರೆ ನಿ ।
ರ್ಮೂಲಂ ಗೆಯ್ದಿಸುವೆನ್ನಿಂ ನಿಜ ವಿಜಯ ಭುಜಾದಂಡವ
ಮಂಡಿಸಿ ಮೆರದಾ ॥
ಬಾಳ ಬಲಾಢ್ಯತೆಯಂ ತೋರಿಸಿ ನಾನಾಭುವ ।
ನಾಳಿಯ ದೇವರ ಕೆಯ್ಯಭಿಷೇಕ ಪಯಃಕಣ ।
ಜಾಳದ ಜಯಸೇಸೆಯ*ತೋರುವೆನೆಂದನುಗೆಯ್ದಂ
ದಕ್ಷಪಿತಾಮಹನು ॥ ೧೭ ॥

* ದ. ಪ್ರ. ಜಯಶಾಖೆಯ.

ಭಾರತಿ ನೀಡುವ ವೀಣಾರವವಂ ತುಂಬುರ
ನಾರದ ರಾಣತಿಯಂ ನಂದಿ ಮಹಾಕಾಳರ ।
ಪೂರಾಯದ ಗತಿಯಂ ರಂಭೆಯ ಕೇಳಿಕೆಯಂ ಭೃಂಗೀಶನ
ನರ್ತನಮಂ ॥

ವಾರಿಜಪುತ್ರನ ವೇದವ ಚಂಡೇಶನ ಕೈ ।
ವಾರವನಾಲಿಸು ತಾನಂದದೊಳಖಿಳಕ್ಕಾ ।
ಧಾರಂ ಭವದೂರಂ ಸುಖಸಾರಂ ಮಹಿಮಾಗಾರಂ
ಮೆರೆದಿರುತಿರಲು ॥ ೧೮ ॥

ಸರಸಿಜಭವ ಸರಸಿಜಲೋಚನ ಸರಸಿಜರಿಪು ।
ಸರಸಿಜಮಿತ್ರಂ ಮೊದಲೆಂದೆನಿಪೆಲ್ಲಾದೇ ।
ವರ ಲೋಕಂಗಳ ಹೊಕ್ಕವರವರುಪಚರಿಸಿದ ಸನುಮಾನದ
ವಂದನೆಯ ॥

ಹರಕೆಯ ನಭಿಷೇಕವ ಸೇಸೆಯ ನುಡು ।
ಗೊರೆಯಂ ಭರವಸದಿಂ ಕೈಕೊಳುತಿನ್ನುಳಿದಾ ।
ಸುರಪರಿವೃತ ಪರಮನ ನೆರಗಿಸಿಕೊಂಬಾಸಕ್ತಿಯೊ
ಳೆಯ್ದಿದನಾ ಸಭೆಗೆ ॥ ೧೯ ॥

ತಾವರೆಗಣ್ಣಂ ಮೊದಲಾದಾ ಸುರರೆರಗುವ ।
ದೇವರದೇವಂಗೆಯ್ತಂದೆಱಗದೆ ಮುದದಿಂದವನಂ ।
ತಾವೈ ವೇದಂ ತುತಿಸುವನಂ ತುತಿಸದೆ ಮುನಿಗಳು
ಚಿತ್ತದಕಂಗಳಲಿ ॥

ಭಾವಿಸಿ ನೋಡುವನಂ ನೋಡದೆ ಮುದದಿಂ ಗ ।
ರ್ವಾವಿಷ್ಟನ ಶಿವನಿಂ ವಂದಿಸಿಕೊಳಲೆಳಸಿದ ।
ನೇವೇಳ್ವೆಂ ಕೆಂಡದತೊಡಿಗೆಗೆ ಮನವಿಟ್ಟರಗಿನ
ಪುತ್ಥಳಿ ಯೆಂತಂತೆ ॥ ೨೦ ॥

ಘನತೂರ್ಯತ್ರಯಮಂ ನೋಡುವ ಭರದಿಂ ದ ।
ಕ್ಷನನಭವಂ ಮನ್ನಿಸ ಮರೆದನೆನಿಪ್ಪುದು ಪುಸಿ ।
ತನುವಿನ ರೋಮಂಗಳೊಳೊಂದೊಂದರ ಮೇಲೊಂದೊಂದಂ
ಮುಟ್ಟದೆ ಕಡೆಗೆ ॥

ಬಿನದದಿ ಹರಿದಾಡುವ ಕೋಟಿ ಬ್ರಹ್ಮಾಂಡದ ।
ನೆನಪಿಲ್ಲೆನಲಂತವರೊಳಗೊಂದರಕಡೆಗೊಂ ।
ಟೆನ ಹಳ್ಳಿಯ ಹೊಳ್ಳುಗಳೊಂಬತ್ತರೊಳೊಬ್ಬ
ನನಿವನಂ ಬಲ್ಲನೆ ಶಿವನು ॥ ೨೧ ॥

ಮರುಳಂ ಬಗೆಯದೊಡೇಂ ಬಗೆಯಳೆ ಮಗಳೆಂದಾ ।
ತರುಣಿಯನಾಲಿಸಿ ಪತಿಯಾದರಿಸದವರನಾ ।
ದರಿಪುದು ಸತಿಗತಿಹಿತವಲ್ಲೆಂದೊಲ್ಲದೆ ನಿಂದಳೊ
ಯಂತಲ್ಲದೆ ಬೇಟೆ ॥

ಧರಣೀಶನ ಮಕುಟದ ಕಳಶದ ಮುತ್ತಿಳಿ*ದಾ ।
ದರದಿಂ ತಾಂ ಜನಿಸಿದ ಸಿಂಪಂ ಕಂಡಂತೆ ವೊ ।
ಲಿರೆ ನಿಂದಂ ದಕ್ಷಂ ಮಂದಿಯ ವಂದನೆ ಗೊಸೆದಾ ಸಭೆಯಂ
ನೋಡಿದನು ॥ ೨೨ ॥

ಎಂತಹ ಪಾತಕವಂ ಮಾಡಿದನೋ ಮಾಡದೊ ।
ಡಿಂತೀ ಶಿವನುಂ ಶಿವೆಯುಂ ಮನ್ನಿಸರೇಕಿವ ।
ನಂತಸ್ಥವನಜೀಯದೆ ನಮಿಸುವುದನುಚಿತವೆಂದೊಲ್ಲದೆ
ಸಭೆ ಸುಮ್ಮನಿರೆ ॥

ಚಿಂತಾಕುಂತಂ ತನುವಂ ತಟ್ಟಲ್ಬಳಿಕಂ
ತಿಂತೆಂದುಪಮಿಸಬಾರದ ಸಂತಾಪದೊಳವ ।
ಮಂತಣ ಗೃಹ ಕೈತರುತಿರ್ದಂ ಕೋಪಾವೇಶದೆ
ಮುಂದರಿಯದ ಖಳನು ॥ ೨೩ ॥

---

* ಪ. ಪ್ರ. ಇನಿವಾದದರದಿಂ..

ಕಱಿಗಟ್ಟಿದ ಬಿರುಗೋಪದ ಮರಹಿಂದಂ ಮುಂ ।
ದಱಿಯದೆ ಪೊರಮಟ್ಟೆನೆನುತ್ತಂ ತನ್ನಂ ತಾಂ ।
ಹುಱುಗುಟ್ಟಿಕೊಳುತ್ತಂ ಪೆಜಿಂಜಿ ಧನಿಯಾದರೆ (?)
ಕರೆಯರಲಾ ಎಂದೆನುತ ॥

ಕಿಱುದೆಡೆಯಂ ನಡವುತ್ತಂ ನಿಂದಿರುತಂ ಕುಱು ।
ಕುಱು ಮೆಟ್ಟುತ ಬರ್ಪವರಂ ಮಿಗೆ ಬಗೆ ವುತ್ತಂ ।
ನೆಱೆ ಸುಯಿವುತ್ತಂ ಬೈವುತ್ತಂ ಜಿನುಗುತ್ತಂ
ನಡೆದಂ ಪಾಪಾತುರನು ॥ ೨೪ ॥

ಪರಪರಿಸುವ ಭೂಪಾಲರನದಿದೆನ್ನದೆ ತ ।
ತ್ತರದರಿದಮರರ ನೆರಗಿಸಿಕೊಂಡೆನ್ನಧಟಿನ ।
*ಹರವಡೆಗೀಬನ್ನಂ ಬಂದೆಮಗಿ ನ್ನಿರವೇತ
ಕ್ಕೆಂಬುಬ್ಬೆಗದಲಿತಾಂ ॥

ನೆರೆ ಚೇತರಿಸಿದ ಚಿಂತಾಚಿತ್ರವೊ ಸಲೆಸೈ ।
ವೆರಗಿನ ಸಾಕಾರವೊ ಕೋಪದಕರುವಿನ ಕಂ ।
ದೆಱವೆಯೊ ಎಂಬಂತಿರೆ ಬಂದಂ ಪುರವೊಕ್ಕಂ ನಿಂದಂ
ನಿಜಭವನದಲಿ ॥ ೨೫ ॥

ನಡೆತರಲಿತ್ತಂ ತನಗಿದಿರ್ವರಲನುಮಾಡಿದ ।
ಪಡಿಯ ಗಜವ್ರಜ ದುರವಣೆಯಂ ತುರಗಂಗಳ ।
ಗಡಣದ ಗರುವಿಕೆಯ ಪದಾತಿಯ ಪಸರದ ನಾನಾವಾದ್ಯಂ
ಬೊಬ್ಬಿಡುವಾ ॥

ಸಡಗರವಂ ಬಿರಿದೆತ್ತುವ ಕಹಳೆಗಳಂ ದನಿ ।
ಗೊಡುವ ಮಹಾಭೇರಿಯ ಭೂರಿಸ್ವನಮುಂ ಕಂ ।
ಡಿಡಿಕಿದನುಮ್ಮಳಮಂ ತುಡುಕಿದಗರ್ಭದೆ ನಿರ್ಬೊಗೆಯಂ
ಕೊಸರಿದನೆನಲು ॥ ೨೬ ॥

---

* ಪ. ಪ್ರ. ಹರವರಿಗೀಬನ್ನಂ.

ಜನ್ನವ ಮಾಡುವೆ ದೇವತ್ವವ ಸುಡುವೆಂ ಬಲು।
ಬನ್ನಂ ಬಡಿಸುವೆ ಶೂಲಿಗೆ ತಾಂ ನೆರೆ ಮುನ್ನಿನೊ।
ಲುನ್ನತಿಯಿಂದಿರ್ದೊಡೆ ಕಡೆಗಿನ್ನೇಂ ನಟ್ಟಿಯು (?)
ಮೇಲಿರ್ದವನೆಂದೆನುತಾ॥

ತನ್ನಂ ಬರಿಸುವೆನೋಲಗಕಿಂದೋಲಗದೊಳ್
ಮನ್ನಿಸದಿರ್ದಮರರ ತಲೆಗಡಿವೆನೆನುತೆ ನುಡಿ।
ಪನ್ನರಕಾಪೇಕ್ಷಂ ಪಾತಕದಕ್ಷಂ ರೌರವಕುಕ್ಷಂ
ತೊಡೆಹೊಯ್ದೂ ॥ ೨೭ ॥

ಕರೆ ಕರೆ ಮಂತ್ರಿವಿದಗ್ಧನನೆಂದಾ ತುರದೊ।
ಳ್ಕರಸಿ ಸಮಂತ್ರಾಲೋಚನೆಯೊಕ್ಕಿಂ ದೊದವಿದ।
ಪರಿಭವಮಂ ತಗ್ಗಿಸಿ ರುದ್ರನ ಸರ್ವೇಶತ್ವಮನೆಸ
ಗಿತ್ರಾತಂಗೆ॥

ಪರಿಭವಮಂ ಕುಡಬಲ್ಲ ಮಹಾಯಾಗವನಾ।
ತುರದಿಂ ಮಾಡುವೆ ನದಕಾವುದು ಬೇಕಾದುದ।
ತರಿಸೇಳೇಳೆಂದವಸರಿಸಿದೊಡಾತಂ ಬಳಿಕಿಂತೆಂದಂ
ಪತಿಯೊಡನೆ ॥ ೨೮ ॥

ಎಲ್ಲಾ ವಸ್ತುಗಳಂ ಪಡೆಯಲ್ ಬಲ್ಲುದು ಧರೆ।
ಯಲ್ಲದೆ ಧರೆಯಂ ಪಡೆಯಲ್ಬಲ್ಲ ಸುವಸ್ತುಗ।
ಳಿಲ್ಲೆಂಬುದನರಿಯಾ ಶಿವನೊಲಿದೊಡೆ ಯಾಗಸಹಸ್ರದ
ಫಲವಂ ಕುಡಲುಂ॥

ಬಲ್ಲಂ ತಾನಲ್ಲದೆ ಶಿವಪದವಿಯ ನೀಯ
ಲ್ಬಲ್ಲವೆ ಯಾಗಂಗಳದೇಕೆಲ್ಲಿಯು ಸಲ್ಲದ।
ಹೊಲ್ಲದ ಕಾರ್ಯವನುದ್ಯೋಗಿಸಿದಪೆಯೆಂದೊಡೆ ಮುನಿ
ದಿಂತೆಂದಂ ಖಳನು ॥ ೨೯ ॥

ಮುನಿದು ವಸಿಷ್ಠಂ ಶಾಪಿಸಿದ ಮಹಾಭೂಪನ ।
ಜನಕನ ತಾನಟ್ಟಲ್ಸಗ್ಗಂ ಬೊಗಿಸಿದ ಬೊ ।
ಮ್ಮನ ಕೂಡಣ ಮುನಿಸಿಂ ಕೌಶಿಕಮುನಿ ಸಕಲವ
ಹುಟ್ಟಿಸನೇಂ ಹೋಮದಲಿ ॥
ಘನಯಜ್ಞದ ಮುಖದಲು ಹಡೆಯಲ್ಬಾರದೆ ಯೆನ ।
ಗನುಕೊಳ್ಳದುದಾವುದು ಬೇಡೆನ್ನದೆ ನೀನೆ ।
ಟ್ಟಿನೆ ತೊಡಗುವ ಹದನಂ ನುಡಿ ಯಲ್ಲಾದೊಡೆ ಕೆಡಹುವೆ
ನೆಂದನು ಪಾತಕನು ॥ ೩೦ ॥

ಕೊಂದೊಡೆಕೊಲು ಯಾಗಂಬೇಡ ಕರಂಬಿಡು ಬೇ ।
ಡೆಂದೆನೆ ಬಿಡೆಬಿಡೆ ನತಿಹೊಲ್ಲಂ ಲೇಸಯ್ಯೋ ।
ನಿಂದೆಗೆ ನೆಲೆಯಹುದಾಗಲಿ ಕೆಟ್ಟಪೆ ಕೆಡುವೆಂ
ಮಾಣೆಂಮಾಣೆಂ ಹೋಗು ॥
ನಂದನೆ ಮುನಿಯಳೆ ಹೈಬಿಡು ಮುನಿಯಲಿ ಬಱಿದೆರೆ ।
ಸೊಂದಕ್ಕೆಡೆಯುಂಟೇ ಯುಂಟೆನ್ನೊಡೆಯನೆ ಮನ ।
ಬಂದಂದದೆ ಮಾಡುವುದನೆಬಿಡು ಬಿಟ್ಟೊಡೆನಗು ನೀನೆಂ
ದಂ ಖಳನಂದು ॥ ೩೧ ॥

ಕಡೆಗೆ ಗಣಂಗಳು ಹುಗದೆಡೆಯಾವುದು ಯಾಗವ ।
ತೊಡಗುವೊಡೆನೆ ಕಾಶಿಗೆ ಪಡುವಲು ರಮ್ಯಾಶ್ರಮ ।
ದೆಡೆಯಣ ಕನಖಳದಲಿ ಮಾಡುವ ಷೋಡಶರುತ್ವಿಜರಾರು
ಮುನೀಶ್ವರರು ॥
ನಡಸುವಪತಿ ಯಾವಂ ಕಮಳಾಕ್ಷಂ ಕಾಹಿನ ।
ಕಡುಗಲಿಗಳದಾರು ದಿಶಾಧಿಪರಿವರೆಂದುಂ ।
ಮೃಡಹಿತಯಾಗಕ್ಕಡಿಯಿಡರೆದ್ದೆರಗರು ಕೇಳೆಂದೊರೆದ
ಚಮೂವರನು ॥ ೩೨ ॥

ಇಂದಾನುಂ ಕರೆದೊಡೆ ಬಾರದ ಮುನಿವರರಂ ।
ಕೊಂದಿಕ್ಕುವೆನೆನೆ ಕೊಂದೊಡೆ ಸಾವರು ತಪ್ಪಿಸಿ ।
ಬಂದಹರೆಂಬೀ ಮಾತಂ ಮರೆಯೆನೆ ಬರಿಸುವುದಕ್ಕಾವುದು
ಬುದ್ಧಿಯೆನೆ ॥

ಇಂದುಧರನ ನಿಂದೆಯನಾಡದೆ ಚುದುರಿಂ ಕರೆ ।
ತಂದಧ್ವರಮಂ ಮಾಡಿಸು ಬಲುಹಂ ತೋಱಿದೊ ।
ಡೆಂದುಂ ನಡೆಯದು ನಡೆಸುವೆಯಾದೊಡೆ ಮಂತ್ರವಿದೆನೆ
ಕೈಕೊಂಡಂ ಖಳನು ॥ ೩೩ ॥

ಉರಗೇಂದ್ರನ ಪದಮುಂ ಭೂನಾಗದಮರಿ ಸುರ ।
ಗಿರಿಯ ಮಹತ್ವವ ನೊಣಮೊರಡಿ ಸಮುದ್ರದ ಭಾ ।
ಸುರತೆಯನ ಡವಿಯಕಿರುಗೆರೆ ಕಲ್ಪದ್ರುಮದವುದಾರಮ
ನೊಣಗಿದತಾರೆ ॥
ಭರದಿಂ ಪಡೆಯಲ್ಬಯಸುವ ವೋಲಪ್ರತಿಮನ ।
ಪರಮೇಶನ ಸರ್ವಜ್ಞತ್ವವನಾ........।
ದರದಿಂಮಿಗೆ ಬಯಸುತ ಗಣಕರನಾಕ್ಷಣ........
ದಿಂದಂ (?) ॥ ೩೪ ॥

ಹರಿಯಲ್ಲಿಗೆ ವಾಣೀಶ್ವರ*ನಲ್ಲಿಗೆ ದಿಗಧೀ
ಶ್ವರರಲ್ಲಿಗೆ ಸರ್ವಾಮರರಲ್ಲಿಗೆ ವಿದ್ಯಾ ।
ಧರರಲ್ಲಿಗೆ ನೆರೆಕಿನ್ನರರಲ್ಲಿಗೆ ಸಲೆ ಖೇಚರರಲ್ಲಿಗೆ
ಮನ್ನಣೆಯ ॥
ಗರುಡೋರಗ ಗುಹ್ಯಕ ಗಂಧರ್ವ ಮರುದ್ಗಣ ।
ತುರಗಾನನ ಮುಖ್ಯರ್ಮತ್ತವರಿವರೆನ್ನದೆ ।
ಬರಬರದಟ್ಟಿದನಿಂದೇ ಬರಬೇಕೆಂದೋಲೆಗಳಂ
ಪಾಪಾತುರನು ॥ ೩೫ ॥

* ರಾ. ಪ್ರ. ವಾಣೀವರನಲ್ಲಿಗೆ.

ತವಕದೊಳಿಂದೆನ್ನದೆ ಕಾಶಿಗೆ ಪಡುವಲುತೋ।
ರುವ ರಮ್ಯಾಶ್ರಮ ದೆಡೆಯಣ ಕನಖಳವೆಂದೆನಿ।
ಸುವ ಪುರದಲಿ ನೆರೆದೊಗ್ಗಿಂ ಜಗದಗಲದಲೋಲಗವಿತ್ತು
ಸಭಾಜನಕೆ ॥

ಶಿವಶಿವ ಯೆನಗನುಮತಿಕೊಟ್ಟುದ್ಧರಿಪುದು ಯಾ।
ಗವ ನೊಂದಂ ಮಾಡುವೆ ನೆಂದಾದಕ್ಷಂ ಬಿ।
ನ್ನವಿಸೆ ಶಿವದ್ರೋಹಮಿದೆಂದರಿಯದೊಡಂಬಟ್ಟ
ರವರು ತಮ್ಮಳಿವಿಂಗೆ ॥ ೩೭ ॥

ಪ್ರೇಮದಿ ಯಾಗಾಭಿಜ್ಞರಕರೆದತ್ಯಗ್ನಿ।
ಷ್ಟೋಮಾಗ್ನಿಷ್ಟೋಮದಿ ನತಿರಾತ್ರ ದಿನಪ್ತೋ।
ರ್ಯೋಮಾಡಂ ಷೋಡಶವಿಶ್ರುತಯಾಗಂಗಳೊಳಾವುದು
ಲೇಸಾದುದನು ॥

ಕಾಮಿಸಿ ತೊಡಗುವದೆಂದೆನಲವರತ್ಯಗ್ನಿ।
ಷ್ಟೋಮವನೆನೆ ಯಜ್ಞದ್ರವ್ಯಪ ತರಹೇಳಾ।
ಭೂಮಿಯ ಶೋಧಿಸಿ ಶಾಲಾವೇದಿಕೆ ಗೊಂಡಂಗಳ
ಮಾಡಿಸತೊಡಗಿದನು ॥ ೩೭ ॥

ಘನಕುಂಡವ ಡಮರುಗ ವೇದಿಕೆಯಂ ತೆಂಕಲು।
ಧನು ನಿಭವರ್ತುಳಮಂ ಮೂಡಲು ಪಡುವಲು ಚೌಕಮು।
ನನು ವರ್ತಿಸಿ ಮುಂದೆ ಹವಿರ್ಧ್ವಾನ ಸರಸ್ಯಂ(?) ಸುದೇವ
ಯಜನಯೂಪವನೆಲೆ ॥

ವಿನುತ ಪ್ರಾಗ್ವಾ ಸೌಮುನಿ ಪತ್ನಿ ಸದನಮಂ।
ದೆನಿಸುವ ಶಾಲಾಗರ್ಭಿತಶಾಲಿ ಯಕ್ಕೈಗ್ಯೆ।
ಯನು ಜನ್ನದ ಜನದಳಿವಿನ ಗತಿವದೇಹದರಸಿತಿ (?)
ವನೆಗೆಯ್ವಂತೆ ॥ ೩೮ ॥

ಹೊಸಮೊರ ಸುರಗಿ ಕಪಾಲ ವುಲೂಖ ಮೃಗಾಜಿನ ।
ಮಶಲಂ ಸರ್ಪಿ ದ್ರುಮನು ಶ್ರುಮತಪನಿಗ್ರಹ ।
ಕುಶ ಸೋಮವುವಾರುಣಿ ಮಥನಿ ಮಹಾವಿರಣಿ
ವಿಶಾಣಂ ಶಂಖಂ ॥

ಶಶಕೋಪರ ವಾಸಂಧಿಗಳೆನಿಸುವ ಪರಿಕರ ।
ವಿಸರವನೊದವಿಸಿ ಬಾಧಿರಿ ಯುಪಶಮಿ ರಜ ।
ಪಶುವಂ ಶಸ್ತ್ರಂ ರಜ್ಜುಂಗಳ ತರಿಸಿದನಾ ದ್ರೋಹಿ
ಲಂಬಕನು ॥ ೩೯ ॥

ಹೋತೃಸದಸ್ಯ ಬ್ರಹ್ಮಾಧ್ವರ್ಯುಮಹಾಪ್ರ ।
ಸ್ತೋತ್ರಸುತುಷ್ಟಾಗ್ನಿ ಧನು ರ್ವಾಜ್ಯಾವಾಕು ।
ಸ್ತೋತೃಪ್ರತಿಹತ್ರ್ಯ ಸುನ್ಮೈತ್ರಾವರನಾರುದುಗಾತ್ರುಂ
ನೆಷ್ಟುಂ ನೇತ್ರವನು ॥

ಹೋತೃ ಬ್ರಹ್ಮಾಂಶುಗಳೆನಿಸುವ ಹದಿನಾರ ।
ಕ್ರೋತ್ರಾಸನವಿತ್ತನು ಸಹಮರಣಾ ಸನ್ನ ।
ಪ್ರೀತನು ಯಜ್ಞದ ರಕ್ಷೆಗೆ ಕಾಹನು ಹೇಳಲು ಕರದಂ
ದಿಗುಪಾಲರನು ॥ ೪೦ ॥

ಕುಂದದೆ ತಂತಂಮೆಡೆಯಂತಾವೇ ರಕ್ಷಿಪು ।
ದೆಂದಷ್ಟ ದಿಶಾವರರಿಗೆ ಬೆಸನಂ ಕೊಟ್ಟು ಮು ।
ಕುಂದಂಗಗ್ರಾಸನವಿತ್ತೆಲ್ಲಾ ಮಾನ್ಯರ್ಗುಚಿತಾಸನ
ಮಂಸಲಿಸಿ ॥

ಸಂದ ಮಹಾದ್ರೋಹಿಯ ಮನೆಯಾಗ್ರವೆ ಕೊಂಬೆಸೆ ।
ವಂದದೆ ಕೆಯ್ಯೋಳ್ಕೋಡಂಬಂಧಿಸಿ ಮೃಗದೊವ* ।
ಲಿಂದಾಚ್ಛಾದಿಸಿ ನವನೀತವನುದ್ವರ್ತಿಸಿದರು ಪಾಪಿಗೆ
ಪಾತಕರು ॥ ೪೧ ॥

---

* ರಾ. ಪ್ರ. ದೊಗಲಿಂ.

ನೆನೆದುರ್ಲೋಖನವಾರಾಸಂಪಾತ್ರಾಸಾ ।
ಧನ ಸರ್ವದ್ರುವ್ಯದ ಸಂಸ್ಕಾರಂ ಪರಿಷೇ ।
ಚನ ಪೂರ ಪರಿಸ್ತರಣಾದಿಯ ನೊದವಿಸಿ ಹೋಮ
ಪ್ರಾರಂಭಕ್ಕಿನ್ನು ॥

ಅನುಮತಿಯಾ ಮುನಿವರರೆಲ್ಲಂ ಬಂದರೆನೋ ।
ಡೆನೆ ನೋಡಿ ದಧೀಚಿ-ಮುನೀಶ್ವರನಿಲ್ಲೆನೆ ಚರ ।
ರನುತಾನಟ್ಟಿದ ಕರೆತಾ ಹೋಗೆಂದುರೆ ಬೆಟ್ಟರಿಯೆ
ಮೃತ್ಯುವ ಕರೆವಂತೆ ॥ ೪೨ ॥

ನಿಂದಿರೆ ಚರರುಂ ಬಂದುರೆ ಪಂಪಾಧೀಶನ ।
ಮುಂದಣ ತೀರ್ಥದ ತಡಿಯ ತಪೋವನದೊಳ್ಮುನಿ ।
ವೃಂದದ ನಡುವಿರ್ದ ದಧೀಚಿಗೆ ದಕ್ಷಂ ಕಳುಪಿದ ಹದನಂ
ಬಿನ್ನವಿಸೆ ॥

ಎಂದೋ ಯಿಂದಾ ಹೊತ್ತೋ ಯಿಾಹೊತ್ತೀಶಂ ।
ಬಂದನೆ ಯದಿದೆನ್ನದೆ ಯಲ್ಲಾ ಬಂದರೆ ।
ಬಂದರೆನಲ್ ಪುಳಕದಪೂರಂ ನಡೆದಂ ತವಕದ ತವನಿಧಿ
ಸುಖಮಯನು ॥ ೪೩ ॥

ಗಡಣದ ವೇದಂಗಳ ಬಗೆಯುಗದಜಹರಿಗಳ ।
ಸಡಗರ ಸಂದಿಸದಪ್ರತಿಮನನಭವನನೆ ।
ನ್ನೊಡೆಯನನೀಕ್ಷಿಸುವೆಂ ಪೈಯಿಕ್ಕುವೆನುಕ್ಕುವೆನಪ್ಪುವೆ
ನಡಿಗಳಿಗೆನುತ ॥

ಬಿಡುಜಡೆ ಯಿಡುಕಜಿ ನೆಡಗೈಯಲಿ ಸುತ್ತುತ್ತಳಿ ।
ಪುಡೆದೊಗಲಂ ಸಂತೈಸುತೆ ಭೂತಿಯನಂತಿಂ ।
ತಿಡುತುಂ ನಡೆತಂದು ದಧೀಚಿ-ವ್ರತಿ ಹೊಕ್ಕನು
ಯಾಗಸಭಾಸವನವನು ॥ ೪೪ ॥

ಕಡುತವಕದೊಳಗ್ರಾಸನದೊಳು ವೇದಂಗಳ ।
ನಡುನೆತ್ತಿಯೊಳೆಲ್ಲಾ ದೇವರ ಮಕುಟಂಗಳ ।
ಕುಡಿಯೊಳು ಮಂತ್ರಂಗಳ ಮಸ್ತಕದೊಳು ಕಾಣದೆ ಮಱುಗುತೆ
ಮಂದಿಗೆ ತಿಱುಗಿ ॥

ಜಡೆಗಳ ತಳ್ತವರೊಳು ಕುಂಡಲವುಳ್ಳವರೊಳು ।
ತೊಡಿಗೆಗಳೆಸೆವವರೊಳು ಹೆಗ್ಗುರುಹಿನ ಹೆಮ್ಮೆಗ ।
ಳೊಡೆಯನ ಕಾಣದೆ ಸುಟ್ಟುರುಹುವೆ ನೀಯಾಗವನೆಂದುರೆ
ದಟವಟಿಸಿದನು ॥ ೪೫ ॥

ಘುಡಿಘುಡಿಸುತ್ತೇನೋ ದಕ್ಷಪುರಾಂತಕನಾ ।
ವೆಡೆಯೆನಲು ಪುರಾಂತಕನೆಂದೊಡದಾರಧ್ವರ ।
ದೊಡೆಯನ ದೇಕೀಯಾಗವ ರಕ್ಷಿಸಬೇಡವೆ ಬೇಡೇಂ
ಕಾರಣಬೇಡ ॥

ನುಡಿಯದಿರವನಿಲ್ಲಿಗಯೋಗ್ಯನು ಯಲ್ಲಲ್ಲಂ ।
ಬಿಡದೇ ಕಲ್ಲೆನಲೆಲುದೊಡುವನು ತೊಗಲುಡುವನು ।
ಸುಡುವನು ತಲೆವಿಡಿವನು ಪಡುವನು ಪ್ರೇತೋರ್ವಿಯೊ
ಳೆಂದಂ ಮುಂದರಿಯದನು ॥ ೪೬ ॥

ಘನಮಂಗಳ ಮಯನಾವುದನುಟ್ಟನದು ಪುನೀ ।
ತನದೇನಂತೊಟ್ಟೆನ್ನೊಡೆಯನದೇನಂಸು ।
ಟ್ಟನುಬಿಡು ಸನುಮಾರ್ಗದೆ ನಡೆದಿಂತೀ
ಹರಿಯಜ ಸುರರು ॥

ಮುನಿಕುಲವೆರಸೊಡವರಿದೊಕ್ಕುದನುಂಡಿತ್ತುರ ।
ನನುಭವಿಸಿ ಸಮಂತಂದೊಲಿದಂತಾಗರೆ ಹೇ ।
ಳೆನಲೀ ಮಹಿಮೆಗಳೆನ್ನಳಿಯನೆನಿಸಲಾರವು
ಕೇಳೆಂದನು ಪಾತಕನು ॥ ೪೭ ॥

ಹರಿಯಜ ಸುರರಳಿವಂತಳಿಯಂ ನಿನ್ನೀಯ ।
ಧ್ವರ ವಳಿವಂತಳಿಯಂ ನೀನಳಿವಂತಳಿಯಂ ।
ಶರಣೆಂದರನಳಿಯಂ ಮಲೆತವರ್ಗಳ ನಿರದಳಿವಂ
ನೆರೆನಿನ್ನಳಿಯನೆನೆ ॥

ಅರೆವೆಣ್ಣ ಕುಲೀನನ ನಾಥನ ನಾಮಿಕನೂ ।
ರ್ವರೆ ಯರಿಯಲಬದ್ಧಂ ಭವ ನಿರ್ಗುಣದೈವಂ ।
ಹರನಾತನ ನೀಂ ನೆನೆಯದಿರೆನೆ ಮುನಿ ಕಡುಗೋ
ಪಿಸಿದ ಸದೇಂವಣ್ಣಿಪೆನು ॥ ೪೮ ॥

ಕಿಡಿಗೆದರಲು ಕಣ್ಣುರಿಗೆದರಲು ಬಿರುಸೆನಿಸುವ ।
ನುಡಿ ಹೊಗರಿಡೆ ಮೊಗ ನಡುಗಲು ಕೈಯಲುಗಲು ಪು ।
ರ್ಬಿಡಿತುಂಬಿಡೆ ಮಿಸುಪಧರಂ ಸಿಡಿಯಲ್ ಪೂಸಿದ
ಭಸಿತಂ ಧೂಮದ ತೆರದಿಂ ॥

ಹಿಡಿದ ಕಮಂಡಲುಜಲ ಕುದಿಯಲು ರೋಮಂಕೌ ।
ಱಡೆ ಲಾಕುಳಹೊಗೆಯಲು ಭರ್ಗನ ಭಾಳಾಕ್ಷನ
ಜಡೆವೊತ್ತವರೊಡೆಯನ ನಿಂದೆಗೆ ಮುನಿ ಮುನಿದಿಂತೆಂದಂ
ಸಭೆಕಂಪಿಸಲು ॥ ೪೯ ॥

ಸುಡು ಸುಡು ಕಡುಪಾತಕ ನಿಂದಕ ನಿನ್ನಶಿರಂ ।
ಹುಡಿಯಂಕಾರಲಿ ನಿನ್ನಧ್ವರ ತಡೆವಿಡದೆಡೆ ।
ಗಡಿಯಲಿ ಹರಿ ಹರಣವ ನೀಗಲಿ ಪೂಷನ ಹಲುಹೋಗಲಿ
ಕಾಲನ ತೋಳ್ಗ ಳ್॥

ಕಡಿವಡೆಯಲಿ ಭಗನಯನಂ ನೋಯಲಿ ಬೊಮ್ಮನ ।
ಮಡದಿಯ ನಾಸಿಕವರೆಯಾಗಲಿ ಮಿಕ್ಕರು ಹುಲು ।
ವಿಡಿಯಲಿ ಧಿಗಧೀಶರು ಭಂಗಿತರಾಗಲಿ ಎಂದಿತ್ತನು
ಶಾಪವ* ಮುನಿಸಂ ॥ ೫೦ ॥

---

ರಾ. ಪ್ರ. * ದೂಷಕಮೇಘಾನಿಳನು.

ಒಡೆಯನ ಕದ್ದುಣ ಬಂದಗ್ನಿಯ ನಾಲಗೆಕೊ ।
ಯ್ಸುಡೆಯಲಿ ಸುರರೆಲ್ಲಂ ಮಡಿಯಲಿ ಮಿಕ್ಕರು ಹುಲು ।
ವಿಡಿಯಲಿ ಯರಿಯದೆ ನೆರೆದಪ್ಪ ಸಹಸ್ರಮೆನಿಸುವ
ಮುನಿಸ್ತೋಮಂ ಕೂಡಿ ॥

ಮೃಡನಡಿಗಳಿ ಗೆಡೆದೆರವಾಗಲಿ ವೇದಾರ್ಥದಿ ।
ನಡೆಯದೆ ನರಕೌಘಾಪೇಕ್ಷಿತರಾಗಲಿ ಹಿಡಿ ।
ಹಿಡಿ ಶಾಪವನೆಂದಿತ್ತಾಗಳೆ ಹೊರವಂಟಂ ಗಜಬಜಿಸೆ
ಸಭಾಜನವು ॥ ೫೧ ॥

ನಿಂದೆಯ ಯಜ್ಞವಿದೆಂದರಿಯೆವು ಶಿವ ಬಂದಪ ।
ನೆಂದಿರ್ದೆವು ನಾವೀಶಾಪವ ಹೊರುವವರ ।
ಲ್ಲೆಂದೆನುತ ಲಗಸ್ತ್ಯವಶಿಷ್ಠಂ ಭೃಗು ಗೌತಮ
ದೇವಲ್ಯುಪಮನ್ಯುಗಳು ॥
ನಿಂದಿರದೆ ದಧೀಚಿಯ ಕೂಡಡಿಯಿಡು ವೇಳೆಯೊ ।
ಳೊಂದೊಂದರ ಹಿಂದೆಂಟು ಸಹಸ್ರಂಬರ ।
ಲಂದು ತೊಡಗಿ ಮೂವತ್ತಿಚ್ಛಾಸಿರವಾದುದು
ಶಾಪಕ್ಕೊಳಗಾದವರು ॥೫೨॥

ರಕ್ಕಸಿಹೀರಿದ ಕುಂಭಕ್ಕೆಣೆಯಾಯಿತು ಮುನಿ ।
ಹೊಕ್ಕದ್ದುಳಿದ ಸಭಾಜನ ವಿನ್ನೇಗುವೆವೆನೆ ।
ಕಕ್ಕುಲಿತೆಯ ಬಿಡಿ ಮುನ್ನವೆ ಬರಲಾಗದು
ಬಂದಿನ್ನೋಡುವು ದತಿಕಷ್ಟಂ ॥
ತೆಕ್ಕನೆ ಹೋಮಂ ನಡುವುದೆ ಲೇಸಿದ ।
ಲೆಕ್ಕಿಸಿ ಕಡುಹಿತನೊಲು ತೊಡಗಿಸಿ ನೆರೆ ಬಿ ।
ದ್ದಿಕ್ಕಿಸುವೆ ನಿದಕ್ಕೆ ನುತ್ತೈಯ್ದಿದ ನೀಶನ ಸಭೆಗಿತ್ತಲ್
ಮುನಿಪತಿ ನಾರದನು ॥ ೫೩ ॥

ಕೃತುವರರೆಲ್ಲರ್ ಪೋದರು ವಿಘ್ನಪ್ರಾಯ ।
ಕ್ಷಿತವಂ ಮಾಡು ಭಯೋರಣಿಯೊಳ್ಮಥನಿಯಪೊಸೆ ।
ಘೃತಮಂತಾಪಿಸು ಯೂಪಾಸಿದ್ಧಿಯ ನೊದವಿಸು
ಸೋಮದ್ರವಮಂ ಹೇಳಿಸು (?) ॥

ನುತಗಾಯತ್ರಿ ಯನುಷ್ಟುಪ್ ಜಗತೀ ಶಕ್ವರಿ ।
ಯತಿಶಕ್ವರಿ ಯುಷ್ಣಿಕ್ಕುಪದೀಕ್ಷನ ಮಂತ್ರಾ ।
ಹುತಿಗೆ ಸ್ವಾಹಸ್ವಧ ದಿಂಧನಮಂ ತಾಯೆಂದ ಮರರವಂ
ಪೂಣ್ಮಿದುದು ॥೫೪॥

ಮಸೆ ಶಸ್ತ್ರವ ಪೂಜಿಸು ಯೂಪವ ನೇಣಿಂಬಂ ।
ಧಿಸು ವಜಪಶು ವೊರಲದ ವೊಲ್ಗಂಟಲ ಮುರಿ ಮ ।
ರ್ದಿಸು ಬಳಿಕುಪಚರಿಸಂಗಂಗಳ ನರ್ಚಿಸು
ಕೊಯಿ ಪಲಲವತೆಗೆ ಶೋಣಿತವಾ ॥

ಬಸಿ ಸುಲಿ ವಪೆಯಂ ಕಾಸಾಹುತಿಯಂ ಕೊಡು ಮಿ ।
ಕ್ಕೆಸರಂ ಪೊರ್ರೀಡಾಶ ಪ್ರಾಶನವಂ ಮಾಡೆಂ ।
ಬ ಸರಂ ಹೊಲಗೇರಿಯೊಳೊಗೆ ವಂತೊಗೆಯುತ್ತಿರೆ
ಸಭೆಯೊಕ್ಕಂ ನಾರದನು ॥ ೫೫ ॥

ಬಂದಗಜೇಶಂ ಗಘನಾಶಂ ಗೀಶಂ ಗಾ ।
ನಂದವ್ರಜದಿಂದಂ ವಂದಿಸಿ ರಿಪು ।
ವೃಂದ ವಿಮೋಚನ ರಚನಾವಚನ ಪ್ರಚಯದೆ
ಕೀರ್ತಿಸಿ ಕೆಲಸಾರುತಿರೆ ॥

ಇಂದುಧರಂ ಕಂಡೆಲ್ಲಿರ್ದೆಯೊ ದುಗುಡಾಂಬುಧಿ ।
ಮಂದರ ನುಡಿ ನುಡಿ ಬಾ ಹತ್ತಿರ ಬಾ ಬಾ ।
ಯೆಂದೊಡೆ ದಕ್ಷಾಧ್ವರ ಸಾಕ್ಷಾಟವಿಯೊಳು
ಬಿತ್ತಿದ ಬೇಗೆಯ ಬೀಜವನು ॥ ೫೬ ॥

ರಾಗದಿ ದಕ್ಷನು ಕೂತಿರ್ದನ ದೇಕಾತನು ।
ಯಾಗಕ್ಕೇತರ ಯಾಗಂ ನಿಮ್ಮಂ ನಿಂದಿಸಿ ।
ಯಾಗಂ ತೊಡಗಿತ್ತೆಂದಿಂ ದೇವಾಗಂ ರವಿ
ಯೊಗೆವಾಗೀಗಾ ॥

ಮೇಗೆಲ್ಲರ್ಬಂದರೆ ಬಂದರದರೊಳೆನ್ನವ ।
ರಾಗಿ ವಿರೋಧಿಸಿ ದವರಿಲ್ಲಾ ಉಂಟಾರ್ ಶಿವ ।
ಯೋಗೀಂದ್ರ ದಧೀಚಿ ವ್ರತಿಯೆನೆ ನಲಿದಂ
ಶಂಬರಸೂದನ ಸೂದನನು ॥ ೫೭ ॥

ತೆಕ್ಕನೆ ಹೇಳೆನ್ನವ ನೇಗೆಯ್ದನೆನಲ್ಮದ ।
ಸೊಕ್ಕಿದ ಕರಿ ಕೊಳನಂ ಪೊಕ್ಕಂತಾ ಸಭೆಯಂ ।
ಹೊಕ್ಕಗ್ರಾಸನ ದೊಳು ನಿಮ್ಮಂ ಕಾಣದೆ
ಘುಡುಘುಡಿಸುತೆ ಮಂದಿಗೆ ತಿರುಗಿ ॥

ಚಕ್ರಧರಂ ಸಹಿತೆಲ್ಲರುಗ್ಗರೆ ಶಾಪವ ನಿ ।
ತ್ರಕರ್ಣಲಬರ ಹಿಂದೆ ವಶಿಷ್ಠಾದಿಗಳೊರ್ವರು ।
ಸಿಕ್ಕದೆ ಪೊರಮಡಲುಳಿದವರೆ ನಡೆಸುತ್ತೈ ದರೆ
ಯೆಂದನು ನಾರದನು ॥ ೫೮ ॥

ಕಿನ್ನರಿಯರ ನಾಲಿಸುತಂಬಿಕೆ ಕೇಳ್ದಿಲ್ಲಿಯ ।
ಜನ್ನದ ಮಾತೆನಲೆನ್ನಂ ಖಿನ್ನನ ಮಾಳ್ಪಧಟಂ ।
ನಿನ್ನಯ್ಯಂ ತೊಡಗಿದನೆನೆ ಘುಡುಘುಡಿಸು
ತ್ತಿರಗುವೆನಧ್ವರ ಬಲವಂ ॥

ಬಿನ್ನಣದಿಂ ಬಿಡಿಸುವೆ ನಲ್ಲದಿರಲ್ಕೆಡಿಸುವೆ ನತಿ ।
ಬನ್ನಂಬಡಿಸುವೆ ನಿಮ್ಮಡಿಯೆನ್ನಂ ಕಳುಪುವು ।
ದುನ್ನತಮೆನೆ ಬೇಡವಮನ್ನಿಪನಲ್ಲೆಂದನು
ಕನ್ನೆಗೆ ಪನ್ನಗಧರನು ॥ ೫೯ ॥

ಶಿವ ನಿನಗಲ್ಲದ ಖಳನೊಳುಮನ್ನಣೆಯಂ ಬಯ ।
ಸುವೆನೆ ಬಯಸಲು ಸತಿಯೇ ಅದೇಕಿಂದೆಲ್ಲವ ।
ನವಿಚಾರವ ನರಿವೆಂ ಜರಿವೆಂ ಮೆರೆವೆಂ ವಾಯದ
ಪಿತಪೆಸಕಂ ॥

ಭುವನೋದರ ಬೆಸಸೆನೆ ಹೈಹದುಳಂ ಹೋಗೆನೆ ।
ತವಕದೆ ವಂದಿಸಿ ಬಿಳ್ಕೊಂಡೆಯ್ದುವ ಲಲನಾ ।
ನಿವಹವನಾಲಿಸಿ ನಿಟ್ಟಿಸಿ ಪಾಲಿಸಿ ಬಂದರ್ದದಳು
ಪುಷ್ಪಕಮಧ್ಯವನು ॥ ೬೦ ॥

ಬಳಿಯೊಳು ಕಾಲ್ಗಾಪಿಂಗಭವಂ ಕಳುಪಿದ ಗಣ ।
ಕುಳಪದರಜ ತಿಮಿರವು ಪುಷ್ಪಕ ಗಗನವು ಮಂ ।
ಡಳಿಸಿದ ಸತಿಯರ ವದನವು ತಾವರೆಗೆಂಪಿಂ ತನ್ನಯ
ಮುಖವೇ ಶಶಿಬಿಂಬಂ ॥

ತೆಳುನಗೆ ವೆಳಗಿನ ಬೆಳತಿಗೆ ಬೆಳುದಿಂ ।
ಗಳ ಮಂಗಳವಾಗಲ್ ಭರದಿಂ ನಡೆತಂದಾ ಹಾ! ನಿ ।
ರ್ಮಳನಿಧಿ ನಿಂದಿರ್ದಳು ಹಂಸಂ ಪಿಂಗಿದ ದಕ್ಷನ ಮುಖ
ಕಮಳದ ಮುಂದೆ ॥ ೬೧ ॥

ಪದಪಿಂದಂ ತನ್ನಂ ಕಾಣುತೆ ನೋಡದೆ ತಿರು ।
ಗಿದ ದಕ್ಷನ ಮುಖ ಶಿವಕಳೆ ಮಸುಳಿಸಿ ಶಶಿಹಿಂ ।
ಗಿದ ರಾತ್ರೆಯ ವೋಲಿರ ಲಿನನುಳಿದಂಬರ ದಂತಿರ
ಲೀ ಮುನಿಸಿಂತೀಖಳನು ॥

ಹದುಳಿರಲೀಯದು ದಿಟವಪಯಶ ವೆನ್ನಂತಾ ।
ಗದವೋಲು ತ್ರಮಿಕೆಯ ನಾಚರಿಸುವೆನೆಂದಳು ।
ಕದೆ ಮತ್ತಂ ಸಮ್ಮುಖದೊಳು ನಿಂದಿರ್ದಳು
ನೋಡದೆ ಖಳತಿರುಗುತಿರೆ ॥ ೬೨ ॥

ಗಿರಿಶನ ಕೀರ್ತಿಯ ತೊಡವೆಲ್ಲಾದೆಸೆದೆಸೆಗಾ ।
ದರದಿಂ ಬರವರಲಾದೆಸೆಯಂ ನೋಡದೆ ನಿ ।
ಷ್ಠುರದಕ್ಷಂ ಸಾಯಲ್ಬಲ್ಲರದೇವಂ ಮುಖಮುಂ
ತಿರುಪುತ್ತಿರಲಾಗ ॥
ಸುರಪತಿಕೇಳ್ ಶಿಖಿಕೇಳ್ ಯಮಕೇಳ್ ನೈರುತಿಕೇಳ್ ।
ಶರಧಿಪಕೇಳ್ ಹರಿಕೇಳ್ ಧನಿಕೇಳ್ ಶಿವಕೇಳ್ ।
ದುರುಳನೊಡಲ ಮೇಲಿನ್ನಿರೆ ನಿರೆನಿರೆನೆಂದರು ಪುವ
ವೋಲ್ ತಲೆತಿರುಗಿದುದು ॥ ೬೩ ॥

ಬಗೆದಾರರುಪದೆ ಕೇಳ್ದಂ ಕರೆಯದೆ ಬಂದುಂ ।
ಮೊಗ ನೋಡದಿರಲ್ ಮೊಗದೊಳ್ ನಿಂದಿಸಲು ।
ಜ್ಜುಗಮಂ ನೋಡೀ ಸಭೆಯೊಳಗಾ ಶಶಿಚೂಡಂ
ಸಲ್ಪುವ ಸಹನೇ ॥
ತೆಗೆ ಯೆನ್ನಂ ಲೆಕ್ಕಿಸದಿರ್ದುಂ ಕಡೆಗಿನ್ನೂ ।
ಮಗಳೇ ನಿನ್ನಾತಂ ಸರ್ವೇಶನೆ ಜಗದೊಳ್ ।
ನಗಿಸದೆ ಬಿಟ್ಟೊಡೆ ದಕ್ಷನೆನಾನೆಂದತಿ ಘೂರ್ಮಿಸಿದನು
ಕಡುಪಾತಕನು ॥ ೬೪ ॥

ಸಡಿ ಘಡ ಘಡ। ಕರದಿಂ ಕರೆಯದೆ ಮಾಣ್ದೊಡೆ ಕ ।
ನ್ನಡಿ ಕುಂದುವುದೇ ಕುರುಡಂ ಕಾಣದಿರಲ್ಕಾ।
ಳ್ಗಿಡೆಯದಿರೆನ್ನೊಡೆಯನ ನಿನ್ನಳವೇ ನಿನ್ನೀ
ಜನ್ನದಕುನ್ನಿಗಳಳವೇ ॥
ಕಡೆಗಾಲಂ ತುಡುಕದೊಡೀ ಕೆಡುನುಡಿಗಳ್ ಪೊರ ।
ಮಡವಾಡಿದ ನೀನೂ ಲಾಲಿಸಿ ಸೈರಿಸಿ ದೀ ।
ಜಡೆಯ ಜಡರು ಸಹ ಪಿಡಿಪಿಡಿ ಶಾಪವನೆಂದಿತ್ತಳು
ಸುಟ್ಟುದ ಸುಡುವಂತೆ ॥ ೬೫ ॥

ಶಾಪಂ ಕಡುಗೋಪವನೆತ್ತಿತ್ತಾ ಕೋಪಾ।
ಟೋಪದಿ ಶಾಪವನೊಡಲಿಸಿದಂತಾ ಪಾಪಾ।
ಳಾಪದಿ ಪರಿಪಾಕಂ ಬಲಿದೆನಗಿನ್ನಂತೇ ನಿಂತೇ
ನೆಂದುರವಣಿಸಿ ॥
ಶ್ರೀಪತಿ ಪತಿಯನು ವಾಣೀಪತಿಯನು ಪೌಳೋ।
ಮೀಪತಿ ಪತಿಯನು ಕೇಳಲ್‌ಬಾರದ ವೋಲಂ।
ತಾ ಪಾತಕ ನಿಂದಿಸಿ ನುಡಿದನು ಶಿವ ಶಿವ!
ಘುಡಿಘುಡಿಸುತೆ ಸತಿ ಮನದೊಳಗೆ ॥ ೬೬ ॥

ಹಿಂದೆಲ್ಲವ ಸೈರಿಸಿದೆಂ ಶಿವ ಶಿವ! ಗುರುವಂ।
ನಿಂದಿಸೆ ಪಿತನೆಂಬುನ್ನತಿಯೆಂದೆಣಿಸದೆ ಭರ।
ದಿಂದಂ ಸುಟ್ಟುರುಹುವುದುತ್ತಮವೆಂದನು ಗೆಯ್ವು
ತ್ತಿಂತ್ಯೆತರುತಿರಲು ॥
ನಿಂದೆಯ ನುಡಿಗಳ್ ಕಿವಿಯಂ ಪೊಗುವವೆ ನಿಂದಕ।
ನಿಂದಾದೊಡಲನಳಿವೆ ನಿವನಂ ಶಿವನೊಪ್ಪಿಸಿ।
ಕುಂದಂ ನೀಗುವ ನಿನ್ನೆಂದನುವಾದಳು
ತುರುಣೇಂದುಧರನ ಸತಿಯಂದು ॥ ೬೭ ॥

ಕಡೆಗೀ ಪತಿವ್ರತೆಯರ ಮನೆದೈವವು ಪುರ್ಬುಗಿ।
ಲಿಡುತಿಹ ಕುಂಡವ ನಿಟ್ಟಿಸಿ ಬಿಸಿ ಮಸುಳಿಸಿ ಶಿಖಿ।
ನಡುಗಲು ನಗುತೆಡಬಲನಂ ಬಲಿದಂತಃ ಕುಂಡಲಿಯೊಳ್
ಪ್ರಾಣವ ತೊಡಚಿ ॥
ನಡು ನೆತ್ತಿಯೊಳೆತ್ತಿದೊಡುರಿಯೆದ್ದಾ ಅಧ್ವರವಂ।
ಸುಡುವಾ ಪಣದಿಂ ಜ್ಯೋತಿ ಸಹಸ್ರರವಿಪ್ರಭೆ।
ಬಿಡದೊಗೆದೆಲ್ಲರ ಕಣ್ಗೆ ತಮಂಧಂ ಗೆದರಲು
ನೆಗೆದಳ್ ಗಗನಾಂಗಣಕೆ ॥ ೬೮ ॥

ತತನಗೆಲ್ಲರ್ ಕಂಗೆಟ್ಟೆವೆನುತ್ತಂ ಝು ।
ಲ್ಲನೆ ಚೆಲ್ಲಿ ಬೆರದೋ್ಡುವ ಮಂದಿಗೆ ಖಳ
ನನುವರಿಯದೆ ಹೆದರುವಿರಾ ನಾನಿರಲಾನಿದ್ಯೆವನ
ಸಂಗದಿ ಗುರುಲಘುಯದಳು ॥

ಎನಗುತ್ತರವಿತ್ತುದರಿಂದಾಕಾಸ್ಮಿಕದುರಿ ।
ತನುಗೆಡಿಸಿತ್ತೈ ಅಂಜದಿರೆನೆ ನಿಂದರು ಮೇ ।
ದಿನಿಗೆ ಶಿವದ್ರೋಹವಿಧಿ ಹೋಗಬಿಡುವುದೇ ಎಂದರು
ಹರಗಣಕೂಡೆ ॥ ೬೯ ॥

ಒದವಿದ ಕಾರ್ಯದ ಹದನರಿಯದೆ ಸುತ್ತಲ್ಗದ ।
ಗದಿಸುತ್ತಿರಲಿತ್ತಲ್ ನಿಜತನುವಿಂ ನಡೆದಾ ।
ರ್ತದಿ ಪದಕೆರಗಿದ ಸುದತಿಯ ಮದನಾಂತಕ
ನಿಂತೇ ಕಾಯಿತ್ತುಸುರುಸುರೆನೆಲು ॥

ಮದದಿಂದವ ನಿಮ್ಮಂ ನಿಂದಿಸೆ ಸ್ಮರಿಸಲಾ ।
ರದೆ ದೇಹವ ನಿರದಳಿದೇಳ್ತಂದೆಂ ಕೇಳೆ ।
ನ್ನದ ಮುನ್ನವೆ ಶಿವ ಕೋಪಾಟೋಪವ ಧರಿಸಿದನದ
ನಾರ್ಬಣ್ಣಿಸಬಹುದು ॥ ೭೦ ॥

(ಅಂತು ಸಂಧಿ ೧ ಕ್ಕಂ ಪದನು ೭೦ ಕ್ಕಂ ಮಂಗಳ ಮಹಾ)

॥ ಶ್ರೀ ಶ್ರೀ ಶ್ರೀ ॥



ಓರುಂಗಲ್ಲಿನ ವೀರೇಶ್ವರಂ

# ವೀರೇಶ ಚರಿತೆ

## [ಎರಡನೆಯ ಸಂಧಿ]

ೂಚನೆ :

ರುದ್ರನ ಭಾಳಾಭೀಳಾಕ್ಷಾ ನಳನಿಂದಂ ।
ಭದ್ರನು ಜನಿಸಲು ಹರ ಬೆಸಸಲು ಸುರಸೈನ್ಯ ಸ ।
ಮುದ್ರಕೆ ವಡಬಾನಲ ದಾಳಿಡುವ ವೊಲೆಯ್ದಿದ
ಭದ್ರಾಣೀ ವಲ್ಲಭನು ॥

ು॥ ಷ॥

ಮನಸಿಜ ದಹನದ ಪುರವಿಘಟನ ದಂಧಕ ಮ ।
ರ್ದನ ಯಮದಹನದ ಗರಳಾಸುರ ಸುರವಿಧ್ವಂ ।
ಸನ ದಂದಿನ ಮುಳಿಸಲ್ಲಿಂದೊಂದಾದಂತುಕ್ಕುವ
ಬಲುಹೊತ್ತುವ ಹೊಗೆವ ॥
ತನುಗೋಪಾನಳ ಮಿಂಗದೆ ಗಂಡಂದವನೊಲಿ ।
ದನು ಕರಿಸಿತ್ತ ಹಿತರು ಬಾಯ್ವಿಡೆ ಶಿವಶಿವ ಭೋಂ ।
ಕನೆ ಹಣೆಗಣ್ಣಿನ ಮುಗ್ಗಿಚ್ಚಿನ ಹಗ್ಗಿಯ ವೊಗ್ಗರದೊಳು
ಥಳಥಳಿಸಿದುದು ॥ ೧ ॥

ಕಡೆಗಾಲದ ಕಿಚ್ಚಿನ ಮುಚ್ಚಳ್ದಿಗದಂದದೆ ।
ಘುಡಿಘುಡಿಸುವ ನಡುಗಣ್ಣಿವೆ ಯೊಡೆಯಲು ತೊಂಗ ।
ಲ್ಗಿಡಿ ಕೆದರುತ್ತುಕ್ಕಿದ ದಳ್ಳುರಿ ಗಗನವ ತೀವಲು
ಬಿರುವಿಸಿಯಿಂ ಕಾದು ॥
ಜಡೆಯೊಳ್ಗಂಗೆಯ ಮಡುವುಕ್ಕುತ್ತೆಸರಿಡೆ ಹೊಗ ।,
ಲೆಡೆಗಾಣದೆ ಸಸಿಬೆವರಿಳಿದುರೆ ಚುಯ್ಯೆನೆ ದನಿ ।
ಗೊಡುವ ಸುಧಾಬಿಂದುವಿನೊತ್ತುವಿಡಿದ ನೆಲೆಲೇ
ವೀರಕುಲಾಧೀಶ್ವರನು ॥ ೨ ॥

ಘುಳುಘುಳು ಘುಡುಘುಡು ಛಿಳಿಛಿಳಿ ಛಿಟಿಛಿಟಿ ಧಗಧಗ ।
ಛಳಛಳ ಭೂರ್ಭೂರ್ಭುಗಿ ಲೆಂಬಬ್ಬರವಿರದ ।
ಟ್ಟಳಿಸಲ್ಕಂಡೆಲೆಲೆಲೆ ಜಯಜಯತು ಬುಬುಬುಬೆಂದು
ಗಣೇಶ್ವರರುಲಿಯೆ ।
ಜಳಧಿಗಳುಕ್ಕಲ್ಕುಲಗಿರಿಗಳ್ಕಂಬಿಡೆ ಧರೆ ।
ಯಳಿಯಲ್ಕಭವನದಿರಲ್ತಾರೆಗಳುದಿರಲು ಶಶಿ ।
ಜಳಜಸಖರ್ತಿರುಗಲು ಜನ್ನದ ಜನ ಜರಿಯಲು
ಲಂಘಿಸಿದನು ನಿಜ್ಜಟನು ॥ ೩ ॥

ಕಡುಪಿಂ ಹಾರಿದ ಭಾರಕ್ಕಿಳೆಬಿರಿದಹಿಪನ ।
ಹೆಡೆಮುರಿದೊಡ್ಡಿದ ಕಮಠನ ಬೆನ್ನಿನಕರ್ಪ್ಪರ ।
ವೊಡೆದಡಿಯಣ ಲೋಕಂಗಳುಡುಗೆ ಕಳೆದುಳಿದಾ
ಮೇಗಣ ಲೋಕಾವಳಿಯ ॥
ನಡುವಣ ಬಾಂದಣ, ಗೊರೆಯಲು ಮಕುಟಂ ರುದ್ರನ ।
ಮುಡಿಗೂರ್ವರೆ ಹಿಡಿದೇಳ್ಕೆಲೆಯ ಮಹಾಸತ್ತಿಗೆ ।
ಗಡಸಿದ ಕಾವೋ ಎಂಬಂತಿರೆ ಬೆಳದಧಟಿಂಗತಿ
ಬೆರಗಾದಂ ಶಿವನು ॥ ೪ ॥

ವೊಡಲೊಳಗುಳ್ಳಿನ್ನ ಮಹಾಕೋಪಂ ಗಡ! ಬಂ ।
ದಡೆ ದುರಿಗಣ್ಣಿಂ ಪೊರಮಡಲುಳಿದತಿ ಶಾಂತಿಯ ।
ಮಡುವೆನಿಸುತ್ತುಂ ತಾನೇಕರಿಯದೆ ಕೆರಳಿದ
ನೇಕಿವ ಜನಿಸಿದ ನೆಂದು ॥
ಮೃಡಬೆರಗಾಗುತ ಹೋಹೋ ಸೈರಿಸು ಸೈರಿಸು ।
ಬಿಡುಬಿಡು ಕೋಪವ ನುಡುಗುಡುಗತ್ಯುದಯುವ ನೀ ।
ಬಡಲೋಕಂಗಳ ನೆಡೆಗೆಡಿಸದಿರೆನೆ ಕಣ್ಗಳವಡು
ವಂದವ ಧರಿಸಿದನು ॥ ೫ ॥

ಸೊಡರ್ಗುಡಿವೆಳಗಿನ ವೈವಣ್ಣಂ ನಿಡುಜಡೆಮುಡಿ ।
ನಡುನೆತ್ತಿಯಲಿಂಗಂ ಮುಕುಟಂ ಫಣಿಕುಂಡಲ ।
ಕುಡಿಗಣ್ಣುರಿಗೆದರುವ ಪಂಚಮುಖಂ ನಿಡುದಾಡೆಗ
ಳೆಸೆವಸಹಸ್ರಭುಜಂ ॥
ಉಡುಗೆಯ ಚಲ್ಲಣ ಕಿಗ್ಗಟ್ಟಿನ ಛೀಳಾಯುಧ ।
ಬಿಡುವ ಶಿರೋಮಾಲಾಭರಣಗಳೆಂಬಗ್ಗದ ।
ತೊಡವಹಿತರ ಹಾಹೆಗಳೆಳೆಯಲು ವೀರೇಶನ
ನಿಲವಾರಂ ನಡುಗಿಸದು ॥ ೬ ॥

ಜವನೋಲಗ ಶಾಲೆಯ ಬಾದಣ ಗೊರೆಯೆಂದೆನಿ ।
ಸುವ ತನುವಿರಳ ವ್ರಜದಿಂ ತನ್ನಂದದ ಭಟ ।
ನಿವಹಂ ನಂಜಿನ ಹುತ್ತಿಂದಂ ತಳರ್ವಾರೌದ್ರೋರಗ
ಸಂಕುಳದಂತೆ ॥
ಶಿವಶಿವ ಪೊರಮಟ್ಟುದ ಸಂಖ್ಯಾತಂ ಬಳಿಕಂ ।
ತವರಿಂ ಪೊರಮಟ್ಟುದು ಭೂತಗಣಂ ನೆರೆಭೂ ।
ಭುವನವ ನೆಡೆಗೆಡಿಸಿತ್ತಡಸಿತ್ತಾಗಿತ್ತ ಗಜೇಶನ
ಕಿವಿ ಛಿವ್ಮಿಡಲು ॥ ೭ ॥

ಸಿಡಿದೆಲುವಿನ ಸೆಕ್ಕೆಯದಾವಾಗ್ನಿಯ ಮೊಳೆಗಳ ।
ಬಡಬಾಗ್ನಿಯ ಚರ್ಮದ ವಟ್ಟಿಗಳೆಳನೇಸರ ।
ಕಡುಹಿನ ತೊಡಪಂ ಕಾಲನ ಕಂಗಳ ಹುಬ್ಬುಗ
ಳಸುರರ ತಲೆಗಳ ಗೆಜ್ಜೆ ॥
ಮುಡಿಸಿದ ಶೇಷನ ಬಂದಿಗೆ ಮಾರಿಯ ಮಂಡೆಯ ।
ನಡುಘಂಟೆಯ ಮೃತ್ಯುವಿನೊಳನರವುರಿದೊಂಗ ।
ಲ್ಪಿಡಿದೊಣಗಲ್ಗರಳುಳ್ಳ ಪಿಣಿಲಚರ್ಮದ ಹಲಗೆಯ
ಕಡುಗಲಿ ಕಣ್ಗೊಪ್ಪಿದನು ॥ ೮ ॥

ಬಳವತ್ಕಾಲನ ಕೋಪದ ಬಂಟಂ ಪ್ರಳಯಾ ।
ನಳನಿಂ ಕಾಯಿಸಿ ರಾಹುವ ಕೇತುವ ಬಲಿದಿ ।
ಕ್ಕುಳಿನಿಂ ತೆಗೆದಂಧಾಸುರ ನೆರ್ದೆಗಲ್ಲೊಳ್
ವಜ್ರದ ಸಮ್ಮಟಿಗೆಯ ನಿಗುಚಿ ॥
ಕುಳಿಕನ ವಿಷದಿಂ ನೀರೂಡಿಸಿ ನೇಸರ ಮಂ ।
ಡಳದಿಂ ಮಸೆದೆಳೆಮಿಂಚಿಂದಂ ಕಲ್ಪವ ನಿ ।
ಟ್ಟಳವಡೆ ರುದ್ರಂ ಮಾಡಿದ ಖಂಡೆಯದಧಟನ
ಹಿಡಿತವ ನೇಂವಣ್ಣಿಪೆನು ॥ ೯ ॥

ಘಲಘಲಘಲ ಛಟಛಟಛಟ ಘಂಘಂ ಘಲ ।
ಘಲಘಲವೆಂಬುಲುಹಿನ ಭುಜಶಾಖೆ ದಿಗುಭಿತ್ತಿಯ ।
ಹೊಲಿಗೆಯ ಹುರಿಹರಿಯಲು ಕೈಯೆತ್ತಿದೊಡಾಗಸ
ದೊಡ್ಡೊಡದಜ ನರಮನೆಯ ॥
ತೊಲೆಮುರಿಯಲು ನೆಲನಂ ಘಟ್ಟಿಸೆ ಕಮಠನ ಬೆಂ ।
ನೆಲು ನೆಗ್ಗಲ್ತಿರುಪಿನ ಗಾಳಿಗೆ ದಿಜ್ನಾಥರ್ನೆ ।
ಲೆದಪ್ಪಲು ಠಕ್ಕಿಸಿ ಛಾಷೆಯ ನವಧರಿಸವಧರಿ
ಸೆಂದಂ ಪಟುಭಟನು ॥ ೧೦ ॥

ಘುರದೊಳು ಹೊಡೆದೊಡೆ ದಿರಿದಿರಿ ದೆಳದಾಡಿಸಿ ಯಾ ।
ಸುರಪತಿ ಶಿಖಿ ಯಮ ಖಳ ವರುಣಾನಿಲ ವಿತ್ತೇ ।
ಶರ ತಲೆಗೊಂಡಿಭ ಕುರಿ ಕೋಣಂ ನರ ನೆಗಳೆರಳೆ
ತುರಂಗಂ ವಜ್ರವನು ॥
ವರಶಕ್ತಿಯ ದಂಡವ ಕತ್ತಿಯ ಪಾಶಾಂಕುಶ ।
ತರವಾರಿಯ ನೀಗಳೆ ತರ್ಪೆಂ ನುಡಿನುಡಿ ದೇ ।
ವರ ಬಲ್ಲಹ ಬೆಸನೇನೆಂದಿತ್ತನು ಛಾಷೆಯ
ನರಿಗಜ ಕಂಠೀರವನು ॥ ೧೧ ॥

ಪೊಡವಿಯ ಬಗಿವೆನೊ ಫಣಿಪನ ನುಗಿವೆನೊ ಜಡಧಿಯ ।
ಕುಡಿವೆನೊ ವಡವನ ಹಿಡಿವೆನೊ ಹರಿಕಮಲಜರನು ।
ಜಡಿವೆನೊ ಕುಲಗಿರಿಗಳ ಹುಡಿಗೆಯ್ವೆನೊ ನಾನಾಭುವನ
ವ್ರಜ ದಡಿಕೀಲ್ಗಳನು ॥
ಕೆಡಹುವೆನೋ ಸುರಪುರವನು ಸುಡವೆನೊ ಗಗನವ ।
ನೊಡೆವೆನೊ ಮಿಡಿವೆನೊ ಶಶಿರವಿಗಳ ತಾರಗೆಗಳ ।
ಮುಡುಗುವೆನೋ ಹೇಳೆನ್ನಾಣೆ ಬೆಸಸೆಂದು
ನಮಿಸಿದನು ಪಟುಭಟನು ॥ ೧೨ ॥

ಬಿಡುಬಿಡು ಸೂರುಳನಿಡು ಬೇಡೊಪ್ಪಿಡಿತೃಣವಂ ।
ಸುಡುವಡೆ ತಳಿಯಂ ಹೊತ್ತಿಸುವರೆ ಜನ್ನದ ಜನ ।
ಡೆಡೆಗಟ್ಟುವೆನೆನೆ ಬೆಸಸವ ಮುನ್ನೀಸರಿ ನೀಂ
ಮರೆದರಿಯದೆ ಬೆಸಸಿದಡೆ ॥
ಗಡಣದ ದೇವರ ಹಣೆಯಕ್ಕರಮಂ ತೊಡೆವಾ ।
ಬಿಡುವಾ ಸೈರಿಸುವಡೆ ಕಳುಹುವೆ ನೀಸೊಂದ ।
ಕ್ಕೆಡೆಯಿಲ್ಲೆನೆ ದೇವರ್ಬೆಸಸಿದ್ದೇ ಬೆಸನೆಂದನು
ವೈರಿಭಯಂಕರನು ॥ ೧೩ ॥

ಅಲ್ಲದ ಕೆಲಸವ ನೆನಗಿತ್ತಂ ಶಿವನೆಂದೆನ ।
ಲಿಲ್ಲಂ ನಿನಗರುಹುವೆಲ್ಲದೆ ಜಳನಿಧಿಗಳ ।
ನೆಲ್ಲವ ನಾಪೋಷನವೆತ್ತುವ ಸತ್ವದ ವಿಷ್ಣು
ಪ್ರಮುಖ ಸುರಾಧಿಪರು ॥
ಅಲ್ಲಿಯ ಕಾಹಿಂ ಗೈದರೆ ನೀನಂತವರಂ ।
ಕೊಲ್ಲದೆ ಕೊಂಡಿಂದೇ ತಂದೊಪ್ಪಿಸು ವೀರರ ।
ಬಲ್ಲಹ ಹೋಗೆಂದಂ ಪಿತೃಪತಿ,ಹೃದ್ಭ್ರಮರನು
ರತಿವಲ್ಲಭ ದಲ್ಲಣನು ॥ ೧೪ ॥

ಒಡೆಯರು ಬೆಸಸಿದ ಕರುಣಕ್ಕೆ ಹಸಾದಂ ನಿ।
ಮ್ಮಡಿಗಳ್ಬೇಡೆನೆ ಕೊಲಬಹುದೇ ಆಜನ್ಮರ್ವ।
ಸುಡುವತಿ ವಂಟರು ಹೋಮದ ಹುಗ್ಗಿಯ ತಿಂದಾ
ದೇವರ್ಕಳ ನೆರೆಹೊಡೆದು ॥
ಕಡುಪಿಂ ದಾಮಂದಿಯ ಮಧ್ಯದಿಲಳಿಯೆದ್ದತಿ।
ಸಿಡುಕುಗುಟ್ಟುತ್ತಿರಲೆನ್ನವ ರುರವಣಿಸಡೆ।
ಬಿಡರಿದಕೆಂತಂಗಜ ಮದಮರ್ದನ ಹೇಳೆಂದನು
ವೀರಾಧೀಶ್ವರನು ॥ ೧೫ ॥

ಮಲೆತೊಡೆ ಕೊಲು ಶರಣೆನೆ ಕಾಯಲ್ಲಿಗೆ ತಕ್ಕುದ।
ನಲಸದೆಮಾಡದ ನಲ್ಲೆಂದೆನೆ? ಎಲೆವೀರಾ! ಯೆ।
ನಲವ ನತಿಹರುಷದೊಳೆನ್ನಯ ಮಾಟವ ನಳುಕದೆ
ಮಾಳ್ಪಿಂ ನೋಡಲುತಕ್ಕ ॥
ಬಲವಂತರ ಬೆಸಸೆನೆ ಬೆಸಸುವ ಭರದಿಂಕೆಲ।
ಬಲನಂ ಬಾಧಿಸಿ ಪೋಪವರಂ ಬಗೆವನಿತ।
ಕ್ಕೆಲೆಲೆಲೆ ಬೊಬ್ಬಿಡುತಬ್ಬರಿಸುತ್ತೊಬ್ಬಾಕಸ್ಮಿಕ
ಸತಿ ತಲೆದೋರಿದಳು ॥೧೬॥

ಗಗನವನೆತ್ತುವ ಮೌಳಿಯ ವಹ್ನಿತ್ರಯಮಂ।
ನಗುವುರಿಗಂಗಳ ನಂಜಿನ ಮಿಸುಪಂ ಮಿಾರುವ।
ಮೊಗವಗರಿನ ಕಾಲನ ಬೊಂಮಾಂಸದ ಮರಿಗಳ
ಮರಯಿಪ ಕಿರುದಾಡೆಗಳ ॥
ಮಿಗೆ ನೀಲಾದ್ರಿಯ ನೈವಡಿವಡೆದುದಯದ ಪ।
ರ್ಬುಗೆ ಯೊಡಲಿನ ಕಾರ್ಮೇಘದೊಳಾಡುವ ಮಿಂಚಂ।
ತೆಗಳುವಲಂಕಾರ ದಶಾಯುಧ ಸಂಯುತೆ
ಭದ್ರಾಣಿಯು ಕಣ್ಗೊಪ್ಪಿದಳು ॥ ೧೭ ॥

ಸದಮುದದಿಂ ತನ್ನಯ ನಡುಗಣ್ಣಿಂ ಪುಟ್ಟಿದ ।
ಚದುರಂ ಗುಮೆಯಂದದಿ ನುದಿಸಿದ ಸುದತಿಗೆ ಸನ್ಮುದ।
ದಿಂದಂ ಮದುವೆಯ ನೊದವಿಸಿದಂತಾ ದಂಪತಿಗಳಿಗೆ
ಗಣಂಗಳ್ಪೆರಸಿ ॥
ಸದಮಳ ಸೇಸೆಯ ನುದಿತೋದಿತ ವರಕೆಯೊಳಿ ।
ಕ್ಕಿದ ಮದನಾರಿಯ ಪದಪದ್ಮಕ್ಕೆರಗುತ್ತಿ ।
ರದೆ ಬಲಗೊಂಡಂ ಬೀಳ್ಕೊಂಡಂ ನಡೆಗೊಂಡಂ
ಚಂಡಾಂಶು ಶತಪ್ರಭನು ॥ ೧೮ ॥

ನಾರದ ರಿಂಗಣಗುಣಿದನು ನಲಿಯೆ ಮರುಳ್ಗ ।
ಳ್ಮಾರಿ ಕರಂ ಬಸುರರಕೆಗೆ ಕಳೆಯಾಯ್ತೆಂದುಲಿ ।
ದಾರಿದರೆಲ್ಲಾ ಶಾಕಿನಿ ಡಾಕಿನಿಯರು ಚೌಕಮ
ನಿರ್ದಳು ನೃತ್ಯಿಸತಿ ॥
ದಾರಿಯ ಸವರಿದ ನಂತಕ ನಿತ್ತಲು ಯಾಗಾ ।
ಗಾರದೊಳು ಕುಪಾತಶತಂ ನೆಗೆದುವು ಶಿವಶಿವ ।
ವೀರಶಿಖಾಮಣಿ ದೇವಶಿಖಾಮಣಿಯಂ ಬೀಳ್ಕೊಂ
ಡಡಿಗೆರಗಿದ ನೆನಲು ॥ ೧೯ ॥

ಹರುಷದೆ ಹರಸಿ ಕರಂ ಪೋಗೆನ್ನದ ಮುನ್ನಂ ।
ತಿರುಗಿ ಕರಂ ಕೈವೀಸಿ ಭುಜಂಬೊಯ್ದೊಡೆ ಸಾ ।
ಗರವುಕ್ಕಿದ ವಾರಿದೊಡಂಬರ ಜರಿಯುತ್ತಿಳ್ಕೇರಿದೊಡೆ
ರಸೆ ಬಸವಳಿದು ॥
ಉರಗನ ಹೆಡೆ ಮಣಿಯಿತ್ತುರವಣಿಸಿದೊಡೆ ದಿಶಾ ।
ಕರಿ ತೆರಳಿದು ವಡಿಯಿಟ್ಟೆಡೆ ಬೆಟ್ಟಂ ಹಿಟ್ಟಾದುವು ।
ಚರಿತದೊಳತುಳಬಳ ಪರಾಕ್ರಮದಾ ವೀರನ
ಸೇನೆಯನೇಂ ವರ್ಣಿಸೆನು ॥ ೨೦ ॥

ಕುಲಗಿರಿಗಳ ಕೈಗುಂಡುಗಳ ಬ್ರಹ್ಮಾಂಡಂ ।
ಗಳ ಹೊಡೆಸೆಂಡುಗಳ ದಿಶಾಕರಿಗಳ ದಂತಂ ।
ಗಳ ಪಿಲ್ಲಣಿಗೆಗಳ ಮಹಾಕಾಲನ ಕೋಣನ ಕೋಡಿನ
ಹೊಸಬಡಿಗೆಗಳ ॥
ಕುಳಿಕನ ಕಡ್ಡಣಿಗೆಯ ಶಶಿರವಿಗಳ ತಾಳಂ ।
ಗಳ ಧರೆ ಗಗನಂಗಳ ಪಲ್ಲಟಿಸುವ ಬಲಯುತ ।
ಬಲದಿಂ ಗಣಕುಲ ನಡೆದುದು ವೀರೇಶನ ಕೆಲಬಲದಲಿ
ಜಗದಗಲದೊಳು ॥ ೨೧ ॥

ಜಗದಗಲದೊಳೈದುವ ವೀರರ ಪದಹತಿಯಿಂ ।
ನೆಗೆದರಜ ರಜಯೆನಿಸುತಂ ಗಗನವ ಮೊಗೆಯಲ್ ।
ಹಗಲಿನ ಹಣೆ ಯಕ್ಕರಮಂ ತೊಡೆದುದು ವೀರನ
ನವಕೋಪಾನಳರಾಹು ॥
ಗಗನಂ ಸರ್ಪಗ್ರಾಸಂ ಗೊಂಡುದು ಎನಿಸುವ ।
ಬಿಗಿಗತ್ತಲೆಯನು ಸಬಳಂಗಳು ಮಿರಲು ಸ ।
ತ್ತಿಗೆಗಳು ಕತ್ತಲಿಸಲ್ಮತ್ತ್ರಸಿಲತೆಗಳು ಬೆಳಗಲು
ಪಡೆಕಣ್ಗೊಪ್ಪಿದುದು ॥ ೨೨ ॥

ತೊಲತೊಲಗೀಬಂದನೆ ಹರನುರಿಗಣ್ಣಮಗಂ ।
ತೊಲತೊಲಗೀಬಂದನೆ ದೂಷಕಗಜಸಿಂಹಂ !
ತೊಲತೊಲಗೆಂದುಲಿಯುತ್ತಿಹ ಕಹಳಾನಾದಂ
ದೆಸೆದೆಸೆಗೆಯ್ದಲು ಮುಂದೆ ॥
ನಲಿವನಲಧ್ವಜಕೋಟಿಗಳಿಂ ದಾಳಿಕ್ಕುವ ।
ಬಲವಂತರ ಸೇನಾಸಂಭ್ರಮಮಂ ಕಂಡ ।
ಗ್ಗಲಿಸುತ್ತಾರುತ್ತನುಮಾನಿಸಿದನು ಮನದೊಳು
ಮತ್ತೊಂದಂ ನಾರದನು ॥ ೨೩ ॥

ಮುನಿದೀ ಸೇನಾಸುಭಟರು ದಾಳಿಟ್ಟತಿ ಪುರ ।
ಹಿನೊಳಾಯಾಗದ ಕಾಹಿನ ಸುರರೆಲ್ಲರ ಕೊಂ ।
ದನಿತರೊಳಿನ್ನಯ ಕಣ್ಣಬರಂ ತೀರುವುದಲ್ಲು ಭಯಬಲಂ
ಮುಂದಲೆ ವಿಡಿದು ॥
ತನತನ ಗಿರಿದಾಡಿ ದಡಹುದಂತಾಗಿಪೆ ನೆಂ ।
ದನುಮಾನಿಸಿ ಪರಿತಂದೆಲೆ ಪಾತಕ ಬಿಡು ಮ ।
ಣ್ಣಿನಹೋಮವ ಕಾಳಗಕೇಳೇಳೆನ ಲೆಲ್ಲಿಯ ಕಾಳಗ
ವೆಂದಂ ಖಳನು ॥ ೨೪ ॥

ವಸುಧಾತಳ ವೈದದು ಸೇನಾ ಬಹಳತೆಗೆ ।
ಣ್ದಿಸೆವೆಯ್ದುದು ವೀರರ ಮಾರಿಯ ಭಾರಕ್ಕಾ ।
ಗಸವೆಯ್ದುದು ತಳಿಗಳ ಬಳಗಕ್ಕಂಬುಧಿ ಜಳ
ವೈದದು ಪಡೆಗದ್ದಿಸಲು ॥
ಬಿಸಗೊರಲನ ಬಿಸುಗಣ್ಣಸುತಂ ಬರುತ್ತೈದನೆ ।
ಹುಸಿದಡೆ ನಿನ್ನಯಪ್ರಾಣಕೆ ತಪ್ಪಿದೆನೆನೆ ಕೋ ।
ಪಿಸಿ ನಿಶಿಮುನಿದೇಗುಗು ನೇಸರನೆಂದಾಸ್ಫಾಟಿಸಿ
ನೋಡಿದ ನಮರರನು ॥ ೨೫ ॥

ನಡೆನಡೆ ಸುರಪತಿ ನಡೆನೆಡೆ ಶಿಖಿ ನಡೆನಡೆ ಯಮು ।
ನಡೆನಡೆ ಖಳ ನಡೆನಡೆ ಜಲಧಿಪ ನಡೆನಡೆ ಹರಿ ।
ನಡೆನಡೆ ಧನಿ ನಡೆನಡೆ ದಿನಮಣಿ ನಡೆನಡೆ ಮಾಧವ
ನಡೆನಡೆ ಈ ಸಕಲಾಮರರು ॥
ಸಡಿ ಫಡಫಡ ನಾನರಿಯದ ಮೃಡನೇ! ಆತನ ।
ಪಡೆಬರಬಹುದೇ!! ಬಂದೊಡೆ ಹಣೆಯಕ್ಕರವಂ ।
ತೊಡೆವೆನೆನುತ್ತಂ ತೊಡೆಯಂ ಹೊಡೆದೆಡೆ ಯುಡುಗದೆ
ಧಡ ಹೊಡೆಯೆಂದನು ಪಾತಕನು ॥ ೨೬ ॥

ಅಗ್ಗಿಸಿದೊಡೆ ದಿಟವೆಂದೆಗ್ಗರಿಯದ ನಗ್ಗದ ।
ಹೆಗ್ಗರು ಸುಗ್ಗುಗಳಂ ಬಗ್ಗಿಸಿ ಕರೆದೊಗ್ಗಿಂ ।
ಮೊಗ್ಗರವಾಯಿತುದಿನ ಹಗ್ಗಿಯ ಹುಗ್ಗಿಯ ಸುಗ್ಗಿಯ
ಹಗ್ಗಂ ಹದುಳಿರುಲು ॥
ಮುಗ್ಗುರು ವೆಂದಗ್ಗದ ಲಗ್ಗೆಯ ಬಗ್ಗಿನ ಭರ ।
ಮುಗ್ಗದೆ ಮುಗ್ಗುಡಿ ವರಿದುರವಣಿಸುತ ತನತನ ।
ಗುಗ್ಗೊಡದೊಯ್ಯಾರದ ವೋಸರಿಸುವ ಭರದಿಂ
ನೆರೆದುದು ಧರೆಯಗಲದಲಿ ॥ ೨೭ ॥

ಕಾಲನ ಕೈಚಕ್ರವ ನೇಳಿಸಿ ತಿರುಗುವ ಮನ ।
ದಾಳಾಪಂ ಪಿಂತಿರೆ ಮುಂತ್ಯೈದುವ ಲುಳಿಯಿಂ ।
ಘೀಳಿರಿ ನಲುಗುವ ಡಮರುವ ನಗ್ಗಿಸಿ ಕೊಡಹುವ
................ಸಾಹಸದ ॥
ಮೇಲೇರುವ ಬಗೆಮಿಗೆ ತಿವುರಿನ ಹೊಂಬಳೆಗಳ ।
ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈ ।
ದಾಳಿನ ಕಾಲ್ಗಾಸಿಂ ಹಡೆಯಂ ಹಣ್ಣಿದ ಕರಿಘಟೆ
ನೆರೆದುವು ಬಲದೊಳಗೆ ॥ ೨೮ ॥

ಕಡುಗಾಳಿಗೆ ಬಿಟ್ಟಂಬಿಂಗೈದುವ ದಿಟ್ಟಗೆ ।
ನಡೆವ ಮನಕ್ಕಿಮ್ಮಡಿ ಮೂವಡಿ ನಾಲ್ವಡಿ ಯ್ಯೆ ।
ವಡಿ ಜವದೊಳು ಬಲದೊಳು ಬೀದಿಯ ಸರಿಸದೊಳನುಪಮ
ನಚಳಂ ಬಳಿಕೆಯೊಳು ॥
ತೊಡೆಮಡಕಿಸಿ ಕಂಬಿಯ ಸರಸನ್ನೆಗಳಾಟದ ।
ತೊಡಕಂ ಹೊದ್ದದೆ ಯ್ಯೆದೇರಿದ ರನುವಾಯ್ತನೆ ।
ಪಡಕಿದ ತುರಗಂಗಳು ನೆರೆದುವು ನಿಂದವು ಧರೆ
ಬೆಸಲಾಯಿತೆನೆ ಬಲದೊಳು ॥ ೨೯ ॥

ತೀವಿದ ಶಸ್ತ್ರಾಸ್ತ್ರದ ದೊಣೆಗಳ ಹಳವಿಗೆಗಳ ।
ದೂವಾಳಿಪ ತುರಗದ ಪಕ್ಕರಿಕೆಯ ಸೂತರ ।
ಜೀವದ ಜತನದ ವಜ್ರಾಂಗಿಯ ಜೀತ್ಸೃತಿ
ಯೆಣ್ದೆಸೆ ಬಸವಳಿಯೆ ॥
ಭಾವಜಹರ ಸಮರದೊಳಿದಿರಾದೊಡೆ ಜಯಿಸುವ ।
ದೇವ ಬಲಕೆ ತವೆನಾಯಕರೆನಿಸಿ ಧನುರ್ವಿ ।
ದ್ಯಾವಾರಿಧಿಗಳೆನಿಪತಿರಥ ಮಹಾರಥರೇರಿದ
ರಥತತಿ ಯೈತಂದವಲ್ಲೈ ॥ ೩೦ ॥

ಕಡಿತಲೆ ಕರಗಸ ಕತ್ತಿಗೆ ಕೊಂತಂ ಕಕ್ಕಣೆ ।
ಕಡುಶೆಲ್ಲೆಹ ಬಲ್ಲೆಹ ಬಿಲ್ಲಲಗು ವಿಗಂಡಸಿ ।
ದಡಿಬಡಿ ಬಿಟ್ಟೇಱಟ್ಟನಖಂ ಚಕ್ರ್ರಸಪರಶು
ಸಿಂಡಿವಳಂ ಪೇರ್ಬಾಳು ॥
ಖಡುಗಂ ಸೂಡಿಗೆ ವಜ್ರಾಸನ ಹೊತ್ತೆಳೆ ಬಿರಿ ।
ಬಡಿಗೆ ಕುಠಾರಂ ಕೈಗಲ್ ಖೇಟಗ ಫಳಕಂ ।
ಬಿಡಿದಮರರ್ ನೆರೆದುದು ತಮತಮಗೇಂ ಹೊಗಳ್ವೆಂ
ಭೂಮಿಯೆ ಕಡೆಗಡಿ ಯೆನಲು ॥ ೩೧ ॥

ಕಡಗುವ ಜವಚೂಣಿಯ ಮನೆಯೊಳು ಭಗಪೂಷರು ।
ನಡೆದಿದ್ದೆಸಗಳ ಬಾಹೆಯೊಳಾದಕ್ಷನ ಬಲದೊಡೆಯನು ತ ।
ನ್ನ ಸನಿಹದೊಳು ಸುರಪತಿ ಮುಖ್ಯಾಮರರು
ನೆಲಡೊಳು ಬಳಿಕುಳಿದ ॥
ಪಡೆಸಹಿತ ಬುಜೋವರ ಹೊಂತಲೆಯೊಳು ಮುಂತೊ ।
ಗ್ಗೊಡೆಯದೆ ನೆರೆದಿದ ಗೆಲವೇಕೆಂಬತಿ ಛಲಮುಂ ।
ಹಿಡಿದು ಕರಂ ತಂತಮ್ಮಾಳಂ ಬಲುಹಿಂ ಜೋಡಿಸಿ
ದರದೇಂ ವಣ್ಣಿಸೆನು ॥ ೩೨ ॥

ಮುಂದೊಡ್ಡಿದ ಹಲಗೆಯ ನೊತ್ತುವಿಡಿದ ಸಬಳದ ।
ದೊಂದಣಿಯೊತ್ತಿ ನೊಳೊತ್ತರಿಸಿದ ಬಿಲ್ಗಾರರ ।
ಹಿಂದಣ ಸರ್ವಪದಾತಿಯ ಬಳಸಿದ ತುರಗದ
ಹೆಡೆಮೆಟ್ಟಿನ ಗಜಘಟೆಯ ॥
ಸಂದಣಿಸಿದ ರಥತತಿ ಮೆರೆಯಲ್ ಮೇಳೈಸಿದ ।
ಮಂದಿಯ ಮುಂದೊಲಿದಾಡುವ ಗೋವಳಗಟ್ಟಿಗೆ ।
ಯಿಂದೊಪ್ಪುತ್ತಮರರ ಪಡೆ ಬಿರುಗಾಳಿಯ ಮುಂದಣ
ಮೇಘಾವಳಿಯಂತೆ ॥ ೩೩ ॥

ಇಳೆಯೊಳಗೆಳನೇಸರು ಮೂಡುವ ತೊಡಕೊಂದೇ ।
ಕಳೆಯನು ತೊಡವಿದ ಕತ್ತಲೆ ಯೊತ್ತಿಯ ತತ್ತಿಯ ।
ಬಲವಂತಾ ದಕ್ಷನ ಬಲದೊಡೆಯರ್ಕಂಡು
ಬುಬುಬುಬೆನುತ ಮಹಾದಳವ ॥
ಇಳೆಹಿಳಿಯಲು ಜವಜರಿಯಲು ಸುರಪತಿಯೆರ್ದೆ ಬಿರಿ ।
ಯಲುಸುರು ಸಿಕ್ಕಲು ಫಣಿಕಮಠರು ಗಳಿಗಂದು ।
ಮ್ಮಳವಾದುದು ಹರಿಬೊಮ್ಮರು ಕಂಬನಿ ದುಂಬಿದರೆನೆ ।
ಯಪಜಯ ಗಜಬಜವು ॥೩೪॥

ಹರಿಬಲವಂ ಕಂಡಳುಕುವ ಮದಕರಿವೊಲ್ ಪಿಂ ।
ತುರವಣಿಸುವ ಹರಿಯಂ ಘುರವಟ ಕಂಡಾಲಲು ।
ಹರಿಚಕ್ರವ ತಿರುಹಿಸಿ ತಿರುಹುವ ಮದದಿಂ ಕಾಣದೆ
ಬೊಮ್ಮನ ತಲೆಗಿಟ್ಟು ॥
ಶಿರವಿಲ್ಲೆನುತಲು ಸುರಪತಿ ಮೊದಲಾದಮರರು ।
ಗರಳದಭಯ ಸುರ ರಸುರರ ಸುಡುವಂದಿಲ್ಲೀ ।
ವುರಿ ಹರಹರಹರ ಯೆಂದೆನುತಂ ಪಡೆ ಬೆದರೋಡಲು
ಹರಿ ಯುರವಣಿಸಿದನು ॥ ೩೫ ॥

ಕುಡಿವೆರಲಿಂ ತಿರ್ರನೆ ತಿರುಗಿಸಿ ಕುಬುಬೆನುತಿಡೆ ।
ಕಿಡಿಗೆದರುತೆ ಬರುತಿಹ ಚಕ್ರವ ಕಡೆಗೆಸೆಯಲು ।
ಕಡಿವೆಡೆದಾಕಾಶಕ್ಕೆ ನೆಗಳ್ದು ಮಗುಳ್ದೋವದೆ
ಬಿಳ್ಪುದು ಬಿಳ್ದಾಗ ॥
ಪಡೆಸಹಿತಬುಜೋದರ ನಳಿವಿಂಗಾಕಾಶದೊ ।
ಳಿಡಿದ ಮಹೋತ್ಪಾತಕ್ಕರ್ಥೇಂದು ನೆಲಕ್ಕುರೆ ।
ಕೆಡಹಿತ್ತೆಂಬಂತೆ ವೊಲಿರೆ ಕೆಡೆಯಲು
ಹೇವರಿಸು ತ್ತಿಂತೆಂದಾಡಿದನು ॥ ೩೬ ॥

ಕಡಿದೆನು ನುಡಿದೆನು ಯಳಿದೆನು ಯಿಾಸರೊಳೆನ್ನಂ ।
ಬಿಡುವುದೊ ತಾಂಕಿಡುವುದೊ ವರಚಕ್ರಂ ತೆಗೆತೆಗೆ ।
ಸಡಿಫಡನೋಡಾದೊಡೆ ನೋಡೆಂದತಿ ಭರದಿಂ ತಿರುಪಿ
ಕರಂ ಕುಕಿಲಿರಿದು ॥
ಇಡೆಲೆಂದೆತ್ತಿದ ಕೆಯ್ಯಂ ಪಾಶಾಸ್ತ್ರದೆ ಜಗ ।
ದೊಡೆಯಂ ಬಂಧಿಸೆ ಭೂತಳವೆಲ್ಲಂ ನೆರೆ ಮೊರೆ ।
ಯಿಡುವಂತಿರೆ ಭೂತಗಣಂಗಳ್ ಕಂಡುರೆ
ಹುರಿಗುಟ್ಟಲ್ ಹೇವರಿಸಿದನು ॥ ೩೭ ॥

ಕಡುಭಾಷೆಯನಿತ್ತುದ ನಾಪಡೆ ನೆರೆಕಾಣು ।
ತ್ತಿಡೆಗೆಟ್ಟೋಡಿತ್ತಾ ಘಟ್ಟಸಿತಾಗಿದ ಬಲ ।
ಹುಡಿಹುಡಿಯಾಯಿತ್ತಿಟ್ಟೊಡೆ ಚಕ್ರಂ ಮುರಿದುದು
ಮತ್ತಿಡಲನುಮಾಡಿದೊಡೆ ॥
ಮಿಡುಕಾಡದೆ ನಿಂದುದು ತೋಳೆನಗಿನ್ನೇನೇ ।
ನಡಸುವುದೋ ತರಹರಿಸುವು ದರಿದರಿದೆನು ತಿಳಿ ।
ದಡಗಿದ ನೆರಳೆಯ ರೂಪಂ ಧರಿಸುತ್ತಾಡುತ್ತೋಡಿದ
ನೊಯ್ಯನೆ ಹೊಳೆಹೊಳೆದು ॥ ೩೮ ॥

ಹದ್ದುದ್ದಕ್ಕೆದ್ದೊಡೆ ಕಂಡಂ ನೆಗಪಿದನೇ ।
ರಿದ್ದವನೇಂ ಬಿದ್ದನೊ ಜನ್ನದೊಳದ್ದನೊ ನೆರೆ ।
ಕದ್ದೋಡಿದನೋ ನೋಡೆಂದಪ್ರತಿಮಂ ಕೆಲಬಲ
ದವರಂ ಬೆಸಗೊಳಲು ॥
ಗೆದ್ದನೆ ನೋಡೇಣಾಕೃತಿಯಿಂದಂ ಮರೆಗಾ ।
ಹೊದ್ದಿದನಾಹೊದ್ದಿದನದೆ ಹೋದನು ನೋಡೆನೆ ।
ಬಿದ್ದಿಕ್ಕುವೆ ನೆಂದಲಗಂಬಂ ತೊಟ್ಟೆಚ್ಚನು
ಹರಕೋಪ ಸಮುದ್ಭವನು ॥ ೩೯ ॥

ಕೆಡೆಯೆಚ್ಚೊಡೆ ಕೊರಳಂ ಕಡೆಗಳೆಯುತ ದರ್ಪಂ ।
ಗೆಡೆದೋಡುವ ಕೃಷ್ಣಮೃಗಕೆ ಮತ್ತಂ ಕಣೆಯಂ ।
ತೊಡೆಲೈಸಕ್ಕೇಲಿಸಿ ಬಿಡದೆಸೆವ ಚೌಭುಜ
ಶಂಖದ ಚಕ್ರದ ಗದೆಯ ॥
ಕಡುಗಲಿ ಕೈವಾರಿಸುತ್ತೈತರೆ ಕಂಡುಗ್ರವ ।
ನುಡುಗಿ ನೆಲಕ್ಕೊಲದೂರಿದ ಧನುವಿನಕೊಪ್ಪಂ ।
ಹಿಡಿದಂಬಂ ತಿರುಪುತ್ತಂ ನಗುನಗು-ತಾರೈದನು
ವೈರಿಭಯಂಕರನು ॥ ೪೦ ॥

ಜಯರಿಪು ಕೋಲಾಹಲ ಜಯರಿಪು ಕುಲಭೀಷಣ ।
ಜಯರಿಪು ಶೋಷಣ ಜಯರಿಪುಫಣಿ ಖಗಪತಿಜಯ ।
ಜಯರಿಪುಕರಿ ಮೃಗಪತಿ ಜಯರಿಪುಗಿರಿ ನಾಕಪತಿ
........................ ॥
ಜಯಭವ ಭಾಳಾಂಬಕ ಶಿಖಿಸಂಭವ ಜಯಜಯ ।
ಜಯಜಯ ಶರಣಾಗತಜನ ರಕ್ಷಾಮಣಿ ಜಯ ।
ಜಯಯೆಂದಷ್ಟೋತ್ತರ ಶತನಾಮದಿ ಕೈವಾರಿಸಿದನು
ರಿಪುಮರ್ದನನು ॥ ೪೧

ಎಸೆಕಂಜದಿರನು ಸರಿಸದೆ ಯುಸುರುಸುರೆಲೆ ರ |
ಕ್ಕಸದಲ್ಲಣಯೆನೆ ದೇವರ ಶರಹತಿಗಾರದೆ |
ಹಸಗೆಟ್ಟೀಹಂದೆ ಮೃಗಾಕಾರವ ಧರಿಸಿದೆನಿಂತೀ
ಕೃಷ್ಣಾಜಿನವ ||
ಶಶಿಮೌಳಿಗೆ ಕೊಡುವೈ ಲಿಂಗಾರ್ಚನೆಯೆಡೆಗಾ |
ಗಿಸುವೈ ಹೈಯಜ್ಞದ ಕರ್ಮಗಳಿಗೆ ಮೊದಲಿದೆ |
ನಿಸುವೈ ತಾಯೆಂದಾ ಚರ್ಮವ ನಾಯುಧಮಂ
ಕೊಂಡುಳಿದರ್ಕ್ನರಸಿದನು || ೪೨ ||

ಚೂಣೆಯ ಹೊಣೆಗರಂ ಮಾನದೆಕಾಣಿಸೆ ಹುಲಿ |
ಗೋಣನ ತೂಣನ ತೋಳಂ ತುಂಡಿಸಿ ಪೂಷನ |
ಕೋಣೆಯ ಹಲ್ಲೆಲ್ಲ ಘಲ್ಲಿಸಿ ಭಗದಿನಪನ ಕಣ್ಣಂ
ಮಣ್ಣೊಳು ನೆರಹಿ ||
ಪ್ರಾಣದ ಭಯದಂದಂ ರಣಗತ್ತಲೆಯೊಳ್ಕ |
ಣ್ಗಾಣದೆ ರೂಹಡಗಿಸಿ ಕದ್ದೋಡುವ ನಾಕದ |
ನಾಣೆಲಿ ಶಕ್ರಾದಿಗಳಭಿಮಾನವ ಕೊಂಡುಂ
ತಿರುಗಿದ ನಧ್ವರದೆಡೆಗೆ || ೪೩ ||

ಕಡುಪಿಂದೊಬ್ಬಂ ಹರಿತಂದೆಲೆ ಪಾತಕ ಸುಡು |
ಸುಡುಯಾಗಂ ಬೆಂದತ್ತಗ್ಗದ ಯಜ್ಞಶಿರಂ |
ಕೆಡಹಿತು ಕಾಲನ ಕೋಳ್ಕಡಿವೊಡೆಯಿತು ಪೂಷನ
ಹಲ್ಲುಡಿಯಿತು ಭಗಲೋಚನವು ||
ಒಡೆಯಿತು ಸುರರೆಲ್ಲರ್ ಮಡಿದರು ಮಿಕ್ಕರು ಹುಲು |
ವಿಡಿಯಿತ್ತಿನ್ನೇಂ ಬಂದನೆ ಯನುವಾಗೆಂ |
ದೊಡೆ ಝುಂಕಿಸಿಹೋಮಂ ನಡೆಯಲಿ ಬಂದೊಡೆ
ಕೈದೋರುವೆನೆಂದಂ ಖಳನು || ೪೪ ||

ಹಿಡಿದಾಹುತಿಯಂ ತುತ್ತಿಡುವರು ಕೆಂಡಗಳಾ |
ಮಡಕೆಯೊಳಗೆ ಬೇಳ್ವರು ಸುಕ್ಸ್ರುವೆಗಳ ನಾಹುತಿ |
ಗೊಡುವರು ಮುನ್ನಳಿದಜಪಶುವಂ ಮರೆದಲ್ಲಿಯ
ಗಡ್ಡದುಪಾಧ್ಯರ ಕೊರಳ ||
ಮಡಿದು ಕೆಡಹಿ ಗಂಟಲನೊಡೆ ಮುರಿಯುವ ರತಿಭಯ |
ಹೊಡೆದೊಂದೊಂದಂ ಮಾಡುತ್ತಿರೆಯಿರೆ ಮಿಾರಿದ |
ರಡಸಿದರಾಡಿದರುರೆ ಕವಿದರು ಬೊಬ್ಬಿಟ್ಟರು
ಸುಟ್ಟರು ಮಖಶಾಲೆಯನು || ೪೫ ||

ಕಡುಗಲಿ ವೀರೇಶಂ ಘುಡುಘುಡಿಸು ತ್ತೊಳಪೊಕ್ಕಾ |
ವೆಡೆ ನಿಂದಕನೆನುತ್ತೈತರೆ ಕಂಡಿದಿರೇಳಂ ಕೆಡೆ |
ಕೆಡೆ ಪಾಪಿ ಶಿವದ್ರೋಹಿ ಯೆನುತ್ತೆರಗಲ್ತಲೆ
ದುಟುದುಟುದುಟು ನುರುಳೆ ||
ದುಡುಮನೆ ಬೀಳಲ್ಕುಂಡಂ ಬಾಯ್ಸವಿಗಾಪಿಸಿ |
ನಡೆತಂದಾ ಹೋಮದ ಕುಂಡದ ಕೆಂಡದ ನಡು |
ನಡುವಗ್ನಿಯ ಬಗೆದ ನಲನ ನಾಲಗೆಯೇಳಂ
ಕಿತ್ತಂ ರಿಪುದಲ್ಲಣನು || ೪೬ ||

ನಿಲ್ಲದೆ ವಾಣಿಯ ವೋಲೆಯ ತೊಂಗಲ ನಿಳುಹಿದ |
ರಲ್ಲಿಯ ಮುನಿಗಳ ಮಿಾಸೆಗೆ ಮಿಡುಗುರಿನಿಟ್ಟರು |
ಹುಲ್ಲಂ ಕಚ್ಚಿಸಿದರು ಹೋಮದ ಹಿರಿಯರ ನೊದೆದರು
ಕುಂಡದ ಕೆಂಡವನು ||
ಚೆಲ್ಲಿದರೆದ್ವಾಸತಿಯರ ಸೆರೆವಿಡಿದರು ಬಳಿ |
ಕಲ್ಲೆಂಬವರಾರುರಿಸರಿದರು ಹರಿದೆರೆಯನ |
ಸೊಲ್ಲಿಸಿ ದಕ್ಷನ ಮಂಡೆಯ ನೊದೆಸೆಂಡಾಡಿದ
ರಾವೀರನ ಕಿಂಕರರು || ೪೭ ||

ನೃಡನೋಲಗಕೀ ದಕ್ಷನನೊಯ್ಯಲೆ ಕೊಯಿ ।
ಪೊಡೆವೊಂದಿದ ಹೊಂದಿದನೆತ್ತುವೆ ನಿನ್ನೆಂದೆಂ ।
ಬೊಡೆ ತಲೆಯಂ ಬಲ್ಲಿದರೊದೆಸೆಂಡಾಡಿದರಿ
ನ್ನೆಂತೆಂದುರವಣಿಸಿ ।
ಕೆಡೆದಿರ್ದಜಪಶುವಿನ ತಲೆಯಂ ಮುಂಡದ ಮೇ ।
ಲಡಸಿದ ರುಂಡವ ಜೀವಂಗೊಟ್ಟಾನಿಂದಕ ।
ನೊಡಲಸುರರು ಮನುಗಳು ಮುನಿಗಳು ಸಹಿತಂ
ಕೋಡಗಗಂಟಂ ಗಟ್ಟಿದನು ॥ ೪೮ ॥

ಖಳದಕ್ಷನ ಜಡಮುಡಿಯನು ದಿಗಧೀಶರ ಮುಂ ।
ದಲೆಯನು ಮುನಿಗಳ ಗಡ್ಡಂಗಳ ನಮರರ ಹೆಡ ।
ತಲೆಯನು ಯಜ್ಞನ ಕುಡಿಗೆಯ್ಯನು ಸತಿಯರ ಸೆರೆಯನು
ಹಿಡಿವತಿ ನಡೆಸುತ್ತ ॥
ಕುಲಿಶಂ ಚಕ್ರಂ ಮೊದಲಾದಾಯುಧಮಂ ।
ತಳೆದುಳಿದೈರಾವತ ಮೊದಲೆನಿಸಿದ ವಾಹನ ಸಂ ।
ಕುಲವಂ ನಲಿದೇರಿ ಗಣಂಗಳು ನಡೆದರು
ಸಂಭ್ರಮವವದ ನೇವಣ್ಣಿಪೆನು ॥ ೪೯ ॥

ಕಡುಗಲಿಗಳ ಬೊಬ್ಬೆಯ ಮೊಳಗುವ ಗೆಲ್ಲವರೆಯ ।
ಬಿಡದೊರಲುವ ಕಹಳೆಯ ಕುಂಬುವ ಕೊಂಬಿನ ಹೊ ।
ಯ್ಡುಡುಗದ ಭೇರಿಯ ನಡಸುವ ಗರ್ಜನೆಗಳ
ಪಡೆಯೊಳು ಪುಟ್ಟುವ ನಿಜದನಿಯ ॥
ಎಡಬಲದೊಳು ಹಾಡುವ ಹರಸುವ ಹೊಗಳುವ ।
ಹೊಡವಡು ವಾರತಿಯೆತ್ತುವ ನಾನಾ ನಾದಂಗಳ !
ಸಡಗರ ದಿಡುಕುರ ನಡುವಡರ್ದಂ ಪೊಕ್ಕಂ
ಕೈಲಾಸವ ನಚಲಿತ ಬಳನು ॥ ೫೦ ॥

ಅರರೇ! ಮಝುಭಾ ಸಪ್ರತಿಮ ಬಳಾಧಿಕನೇ! |
ಉರುಪಟುಭಟ!! ನಿಮ್ಮಿಂದೀ ಹೊಟ್ಟೆಯಹೊಲಿಗೆಯ |
ಹುರಿ ಹರಿದುದು ಬಸುರಬರಂ ಹೋದುದು ಬಯಕೆಗೆ
ಬಿಡುಗಡೆ ಯಾಯಿತ್ತೆಂದು ||
ಹರಸುವ ಮಾರಿಯ ಹೊಗಳುವ ಮೃತ್ಯುವ ನಲಿದ |
ಬ್ಬರಿಸುವ ಮರುಳ್ಗಳ ಹುಡುಕುವ ಶಾಕಿನಿ ಡಾಕಿನಿ |
ಯರನಾಡುವ ಬೇತಾಳರ ನೀಕ್ಷಿಸಿ ನಗುತಂ
ನಡೆದಂ ವೀರೇಶ್ವರನು || ೫೧ ||

ಯುವತಿಯೆ ಬಾ ಹೇಳಿವರೊಳು ದಕ್ಷನೆನಿಪನಾ ತಾ ಹೋ |
ಗುವಣಲ್ಲಿಗೆ ಕುರಿಮೊಗದವನಲ್ಲಾ! ಅವುದವು |
ದವುದಿಸ್ಸೀ ಹೊಲೆಮೋರೆಗೆ ಬೇಕೇ ಬೇಕಹಿಭೂಷಣ
ನಿನ್ನಯ ಮಾತು ||
ಇವನೇಕಿಂತಾದನೊ... ಪಿನ್ನುರೆ ಕೇ |
ಳುವುದಿಲ್ಲಂ ಹುಸಿಯಲ್ಲಿನ್ನಾಣೆ ಶಿರಸ್ಸಂ ಕಡಿ |
ದವಿಮುಖವಿಟ್ಟಂ ವೀರೇಶನೆನಿಪ್ಪೀಸೊಳ್ನುಡಿ
ನೆರೆದುವು ಸತಿಯರೊಳು || ೫೨ ||

ಈ ಬಂದನೆ ಶಿವದೂಷಕ ಗಜಕಂಠೀರವ |
ನೀ ಬಂದನೆ ಶಿವದೂಷಕಕುಲ ಮದಮರ್ದನ |
ನೀ ಬಂದನೆ ಶಿವದೂಷಕಸಂಕುಲ ವನನಿಧಿಮಥಿತ
ಮಹಾಮಂದರನು ||
ಈ ಬಂದನೆ ಶಿವದೂಷಕ ತಿಮಿರದಿವಾಕರ |
ನೀ ಬಂದನೆ ತೊಲತೊಲಗೆಂದುಲಿಯುತ್ತಿಹ ಕಹ |
ಳಾಬಂಧುರನಿನದಿಂ ನಡೆತಂದರಮನೆಯಂ
ಪುಗುತೆಂದಂ ಪಟುಭಟನು || ೫೩ ||

ಕರೆದಲ್ಲದೆ ತರಬೇಡಬುಜಾಂಬಕ ಮುಖ್ಯಾ ।
ಮರರಾರುವನೆಂದು ಗಣಂಗಳ್ಗೆ ಬೆಸಂವೇ ।
ಳ್ಪಿರಿಸಿ ಸಮಂತರಮನೆಹೊಕ್ಕಂ ದೊದವಿದ
ಪರಿಭವಮಂ ಬೀಳ್ಕೊಂಡು ॥
ಚರಣಂಗಳಿಗೆರಗಿದ ವೀರೇಶನನಘ ಸಂ ।
ಹರನಾದರಿಸುತ್ತಿಪ್ಪನಿತಕ್ಕಂ ಕವಿದೊ ।
ತ್ತರಿಸಿದ ರುರವಣೆಸಿದರ ಪ್ರತಿಮನ ಮೇಲಣ
ಮನ್ನಣೆಯ ಮಹಾಭಟರು ॥ ೫೪ ॥

ಘನಯಜ್ಞನ ಶಿರವಿದು ದಕ್ಷನ ತಲೆಯಿದು ಕಾ ।
ಲನ ತೋಳಿದು ಭಗಲೋಚನವಿದು ಪೂಷಾದಿ ।
ತ್ಯನ ಹಲ್ಲಿದು ವಾಣಿಯ ಮೂಗಿದು ಮೃಗದೊಗಲಿದು
ಗದೆಯಿದು ಹೊಸಚಕ್ರವಿದು ॥
ಅನಲನ ನಾಲಗೆಯಿವು ಸುರಪತಿ ಮುಖ್ಯರ ವಾ ।
ಹನವಿವು ಮಂಡನ ಶಸ್ತ್ರಾಸ್ತ್ರಾವಳಿಯಿವು ಸ ।
ನ್ಮುನಿಗಳ ಸ್ರುಕ್‌ಸುವವಿವು ಚಿತ್ತೈಸೆಂದೊಪ್ಪಿಸಿದರು
ವೀರನ ಕಿಂಕರರು ॥ ೫೫ ॥

ಹಿಂದರಿಯದೆ ನಿಂದಿಸಿದೀದೋಷಂ ಕುರಿಮೊಗ ।
ದಿಂದರಿಯಲ್ ಬರುತಿದೆ ಪಶುವಾಂ ಪಶುಪತಿ ನೀ ।
ನೆಂದು ಮಹಾದೈನ್ಯದಿ ದಕ್ಷಂ ಕೀರ್ತಿಸೆ ಮೆಲ್ಲನೆ
ನಗುತೇಳಿಸಿ ಕೃಪೆಯಿಂ ॥
ಎಂದನು ಮನವೊಲಿದುದ ಬೇಡೆನೆ ಕ್ರತುಫಲವಂ ।
ತಂದೆ ಕರುಣಿಸೆನಗೆನೆ ಶತಯಜ್ಞದ ಫಲಗಳ ।
ನಿಂದುಧರಂ ಕೊಟ್ಟಂ ಸುರರ ಶಿರದೊಳಗಭಯ
ಕರವನಿಟ್ಟಂ ಕರುಣಾಕರನು ॥ ೫೬ ॥

ಸಾಯದೆ ಬರ್ದುಕಿದಜ ಹರಿ ಸುರ ಸಂಕುಲವ ।
ನ್ಯಾಯವನೆಂದುಂ ನೀಂ ಬಳಸದಿರೆಮ್ಮಲ್ಲಿಯ ।
ಪಾಯಂಗೊಳದೀ ಹಮ್ಮೀರಿದ ಸಾಕ್ಷಾಚ್ಛ್ರೀ
ವೀರದ ರುದ್ರನುಮಿವನ ॥
ಘಾಯಕೆ ತರಹರಿಸಲು ಬಾರದೆನುತ ಹಂಪೆಯ ।
ರಾಯನವರ ಕಳುಹಿದ ಕೃತಿಯಂ ರಚಿಸಿದ ಕವಿ ।
ರಾಯನ ವರಸುತ ರಾಘವದೇವನ
ಬಿನ್ನಪಮಂ ಸದ್ಭಕ್ತಜನರ್ಕೇಳಿ ॥ ೫೭

ಅಂತು ಸಂಧಿ ೨ಕ್ಕಂ ಪದನು ೧೨೭ಕ್ಕಂ ಮಂಗಳಮಹಾ

ಶ್ರೀ ಶ್ರೀ ಶ್ರೀ.

——:o:——



ಶ್ರೀ ವೀರಭದ್ರ ದೇವರು

" ವೀರಕುಲಾಧೀಶ್ವರ ಹಲಗೆಯ ಕಡುಗಲಿ
ವೀರೇಶನ ನಿಲವಾರಂ ನಡುಗಿಸದು "

— ರಾಘವಾಂಕ

" ಶಿವಗೆ ಶಿಸು ದಕ್ಷಯಾಗಕ್ಕೆ ಪುಟ್ಟಿದ ಮಾರಿ "

— ಹರೀಶ್ವರ

# ವೀರಭದ್ರ ದೇವರ ರಗಳೆ

——:o:——

ಕಂದಃ—

ಪಿರಿದುಂ ಬಗೆಯದೆ ದಕ್ಷಾ।
ಧ್ವರಮಂ ನಿರ್ಧೂಮಧಾಮಮಂ ಮಾಡಿ ಸುಧಾ॥
ಕರಧರನ ವಿರೂಪಾಕ್ಷನ!
ಚರಣವನೈತಂದು ವೀರಭದ್ರಂ ಕಂಡಂ॥

ಲಲಿತ ರಗಳೆ—

ಶ್ರೀರಜತಗಿರಿಯೊಳೊಪ್ಪುವ ಸಭಾನಿಳಯದೊಳು।
ಮಾರಾರಿ ಹಂಪೆಯ ವಿರೂಪಾಕ್ಷನೊಪ್ಪದೊಳು॥

ಭೂತೇಶನಪ್ರತಿಮರೂಪಸೊಪ್ಪುತ್ತಿರ್ದ।
ನಾತನೊಡ್ಡೋಲಗವನೇನೆಂಬೆನೆಸೆದಿರ್ದ॥

ಲಕ್ಷ್ಮಿಸರಸ್ವತಿಗಳಂದೊಸೆದು ಚಾಮರವಿಕ್ಕೆ।
ಸೂಕ್ಷ್ಮದಿಂದಿಂದ್ರಾಣಿ ನಲಿದು ಸೀಗುರಿಯಿಕ್ಕೆ॥

ರಂಭೆ ಯೂರ್ವಶಿ ತಿಲೋತ್ತಮೆ ಮಂಜುಘೋಷೆಯರು।
ಶಂಭುವಿನ ಕೆಲಬಲದೊಳುಪ್ಪವತಿ ನೀರೆಯರು॥

ತರತರದೊಳೇ ವಾರವನಿತೆಯರ್ಕುಳ್ಳಿರಲು।
ಸುರನಾರಿಯರ್ಸಮುಚಿತಾಸನದೊಳೊಪ್ಪಿರಲು॥ ೧೦

ಕರಿವದನನುಂ ತಾರಕಾರಿಯುಂ ಬಂದಿರಲು।
ಸರಸಿಜಭವಂ ಸರಸಿಜೋದರಂ ಬಂಧಿರಲು॥

ಕೆಲಬಲದೊಳೊಪ್ಪದಿಂ ಅಮರಗಣನಾಯಕರು।
ಛಲಿಗಳಪ್ರತಿಮರತಿರಥರುಗ್ರನಾಯಕರು॥

ಸಚರಾಚರವನಳಿವ ಮಾಡುವಾ ನಾಯಕರು।
ಅಚಲರಭವರ್ತಮತಮಗೆ ಮುಖ್ಯರತಿಶಯರು॥

ಕಂತುಹರನಾಪ್ತಪರಿವಾರವೆಂದೆನಿಸಿರ್ಪ।
ಸಂತತಂ ಪರಮಂಗೆ ಪರಮ ಬಂಧುಗಳಪ್ಪ॥

ನೆನೆವ ಮನವೀವ ಕೈವಿಡಿವ ಕೈದುಗಳೆನಿಪ।
ತನಿನೇಹದಿಂ ನೆರೆವ ಕಡು ಬಾಕುಳಿಗಳೆನಿಪ॥

ಪುರವಂ ಕ್ಷಣಾರ್ಧದೊಳ್ಸುಟ್ಟ ಶರಣರ್ಕೆಲರು।
ಶರಭರೂಪಾಗಿ ತಲೆದಂದ ಶರಣರ್ಕೆಲರು॥

ಲೀಲೆಯಿಂ ಮನಸಿಜನನುರುಪಿದರ್ಕೆಲರಲ್ಲಿ।
ಕಾಲನಂ ಕೋಪದಿಂ ಸುಟ್ಟವರ್ಕೆಲರಲ್ಲಿ॥

ಸಿಡಿಲ ಬಳಗಮನೊಂದುಗೂಡಿ ಗಡಣಿಸಿದಂತೆ।
ಮೃಡನತಿಬಲಂ ಬೇರೆ ಬೇರೆ ರೂಪಾದಂತೆ॥

ಕೆಲರೆ ಸಾಲೋಕ್ಯದರ್ಕೆಲರೆ ಸಾಮೀಪ್ಯದರ್।
ಕೆಲರೆ ಸಾರೂಪ್ಯದರ್ಕೆಲರೆ ಸಾಯುಜ್ಯದರ್॥

ಹೊಗಳಲೆನ್ನಳವೆ ಗುರು ವಿರುಪಾಕ್ಷನಣುಗರಂ।
ಬಗೆಗಗೋಚರವೆನಿಪ ಶಿವಲಿಂಗಸೊಬಗರಂ॥

ಇಂತೆಸೆವ ನಂದೀಶ್ವರಾದಿ ಗಣತತಿ ಬಂದು।
ಕಂತುಹರನಿಕ್ಕೆಲದೊಳೆಸೆಯೆ ನಲವಿಂ ನಿಂದು॥

ಭೃಗುವು ದೂರ್ವಾಸ ದಧೀಚಿ ಕಶ್ಯಪರೆಂಬ।
ಮಿಗೆ ಭಗೀರಥ ಜಹ್ನು ಜಮದಗ್ನಿ ಶುಕರೆಂಬ॥

ಜೈಮಿನಿ ವಶಿಷ್ಠ ಮಾರ್ಕಂಡೇಯರೆಂದೆಂಬ|
ರೋಮಜನು ಜಾಬಾಲ ಗಾರ್ಗ್ಯ ಗೌತಮರೆಂಬ||

ತರದಳೊಪ್ಪುವ ರಾಜರುಷಿ ದೇವರುಷಿಗಳಿಂ|
ಪರಮ ಕಾರುಣಿಕರೆನಿಪಾ ಬ್ರಹ್ಮರುಷಿಗಳಿಂ||

ಸುರಪ ಶಿಖಿಯಮ ನೈಋತಾಪ್ಪತಿಗಳೆಂಬರಿಂ|
ನರವಾಹನೀಶಾನರೆಂಬ ದಿಕ್ಪಾಲರಿಂ||

ಇರೆ ಸುರರು ದನುಜ ವಿದ್ಯಾಧರರ ವೀಧಿಗಳು|
ನೆರೆದ ಗಂಧರ್ವರ ಫಣೀಶ್ವರರ ಪಜ್ತಿಗಳು||

ಮೆರೆಯಲಜಕೋಟಿ ಪಂಕಜನಾಭ ಕೋಟಿಗಳು|
ತುರುಗಿ ರವಿಕೋಟಿಗಳು ಶೀತಾಂಶು ಕೋಟಿಗಳು||

ಎಸೆವುತಿರೆ ಸಾಲಿಟ್ಟು ಮಕುಟಂಗಳೊಂದು ದೆಸೆ|
ಒಸೆದೊಸೆದು ಕೈಮುಗಿವ ಯಕ್ಷತತಿಯೊಂದು ದೆಸೆ||

ಕಿವಿಗುಡುವುದೆಮಗೆಂಬ ನಾದಂಗಳೊಂದು ದೆಸೆ|
ತವಕದಿಂ ತುತಿಯಿಸುವ ವೇದಂಗಳೊಂದು ದೆಸೆ||

ಧರೆ ಜಲಂ ಸಪ್ತಾರ್ಚಿ ವಾಯುವಾಕಾಶದಿಂ|
ಖರಕಿರಣ ಹಿಮಕಿರಣ ವಾತ್ಮಸಂತಾನದಿಂ||

ಬೆಸವೇಳ್ವುದಂ ಬಯಸುವಣಿಮಾದಿ ನಿಕರದಿಂ|
ಬೆಸಸು ಬೆಸಸೆಮಗೆಂಬ ಸಾಮರ್ಥ್ಯವೊತ್ತದಿಂ||

ಪವಣಿಸುವಡರಿದೆನುತ್ತಿರ್ಪ.ಶಾಸ್ತ್ರಂಗಳಿಂ|
ತಮ ತಮಗೆ ಹೊಗಳುತೊಪ್ಪುವ ಪುರಾಣಂಗಳಿಂ||

ಮೌನದಿಂ ನಿಂದಿರ್ಪ ತರ್ಕಸಂದೋಹದಿಂ|
ಧ್ಯಾನಿಸುತ್ತಿರ್ಪ ಸಕಲಾಗಮವ್ಯೂಹದಿಂ||

ಹತ್ತಿ ಸಾರ್ದೋಲಗಿಪ ಚೆಲ್ವುಗಳ ವೊತ್ತದಿಂ।
ಮುತ್ತಿ ಬಂದೋಲಗಿಪ ಸಂಪನ್ನಿಕಾಯದಿಂ॥

ತರತರಂಗೊಂಡಿರ್ಪ ಪುಣ್ಯ ಸಂತಾನದಿಂ।
ನೆರೆನೆರೆದು ಬರುತಿರ್ಪ ಬಯಕೆಗಳ ವೊತ್ತದಿಂ॥

ನಲಿದು ಬಂದೋಲಗಿಪ ಸಕಲ ಸುಖನಿಕರದಿಂ।
ಸಲೆ ಕೈಮುಗಿಯುತಿರ್ಪ ವೀರಗಣನಿವಹದಿಂ॥

ಕಡೆ ಕಡೆಯೊಳೋಲಗಿಪ ಜಸವೆಣ್ಗಳಿಕ್ಕೆಯಿಂ।
ಬಿಡದೆ ತೋಳ್ಗಳನೋಲಗಿಪ ಜಯತತಿಗಳಿಂ॥

ಚರಣಮಂ ಪಿಡಿದಿರ್ಪ ಮಂಗಳದ ಪಜ್ಜೆಯಿಂ।
ಹಸವರಿಯೊಳುರಿವ ಘನ ತೇಜಂಗಳಿಕ್ಕೆಯಿಂ॥

ಕಡೆಗಂಗಳಂ ಬಯಸುತಿರ್ಪ ಕಾರುಣ್ಯದಿಂ।
ಮೃಡನ ವರಮಂ ಪಾರ್ದು ನಿಂದಿರ್ಪ ಭಾಗ್ಯದಿಂ॥

ಎನಗೆ ತನಗೆನುತಿರ್ಪ ಭೋಗಂಗಳೊಗ್ಗಿನಿಂ।
ತನತನಗೆ ನಲಿವ ಗಣಪದವಿಗಳಗುರ್ವಿನಿಂ॥

ಸಿರ್ಸಿಕಾರದೊಳಿರ್ಪ ಶಾಂತಿಗಳ ಕೊರ್ವಿನಿಂ।
ಶರ್ವನಂ ಬಯಸುತಿಹ ಮಂಗಳದಗುರ್ವಿನಿಂ॥

ಬೆಳಗನುಗುಳುತ್ತಿರ್ದ ಕಾಂತಿಗಳ ಬಳಗದಿಂ।
ತಿಳಿಯಲೆಂದಿರ್ದಖಿಳ ವಿದ್ಯಾಸಮೂಹದಿಂ॥

ಸಾರೆ ಬಂದೋಲಗಿಸಲೆಂದಿರ್ದ ನೃತ್ಯದಿಂ।
ಕಾರುಣ್ಯಮಂ ಬಯಸಿ ನಿಂದಿರ್ದ ಸತ್ಯದಿಂ॥

ಇಂತು ಸಕಲೈಶ್ವರ್ಯದುನ್ನತವನೊಳಕೊಂಡ।
ನಂತಂತೆ ಹೊಗಳಲಾರದ ಘನವನೊಳಕೊಂಡ॥

ದೆಂತೆಂತು ಪಮೆಗಗ್ಗಳವಾದುದಾಸ್ಥಾನ|
ವಂತಂತೆ ಪೆರೆದುದು ವಿರೂಪಾಕ್ಷನಾಸ್ಥಾನ||

ಆ ಸಮಯದೊಳು ದಂಡಧರರೆಂಬ ಭಟರಲ್ಲಿ|
ವಾಸವನೆ ನುಡಿ ಬೇಡ ಸಂತವಿರು ನೀನಿಲ್ಲಿ||

ಕಾಯ್ಪನುಡುಗಗ್ನಿ ಹೆರೆಸಾರ್ಕಾಲ ಕೌಣಪನೆ|
ಸೈಪಿನೊಳಿರಬ್ಧಿಪತಿ ಸುಳಿಯದಿರ್ಮಾರುತನೆ||

ತೆರಹುಗುಡು ಗಂಧರ್ವರಾಜ ಕಿನ್ನರಪತಿಗೆ|
ಬರಿದೆ ಗಳಪದಿರೆಲವೊ ಬ್ರೊಮ್ಮನಿನ್ನುತಿಗೆ||

ಬಿನ್ನವಿಸು ಮನ್ನಣೆಯ ವನಜಾಕ್ಷ ಕೈಮುಗಿದು|
ನಿನ್ನ ಹೆಡೆಗಳನುಡುಗಿ ನಿಲ್ಲಹಿಪ ಹೆರೆ ತೆಗೆದು||

ಕಳಕಳವಿದೇಕೆ ಮಾಣ್ಮಾಣು ಹೋ ಹೋ ಎನುತೆ|
ಅಳವಲ್ಲ ಸಂತೈಸ ಬಾರದಾಹಾ ಎನುತೆ||

ಇವನಾವ ಬೊಮ್ಮಾಂಡದಬ್ಜಜಂ ಹೇಳೆಂದು|
ಇವನಾವ ಬೊಮ್ಮಾಂಡದಬ್ಜೋದರನು ಮೆಂದು||

ಆವಾವ ಸ್ವರ್ಗಂಗಳಿಂದ್ರರ್ಕಳಿವರೆಂದು|
ಆವಾವ ಲೋಕದವರೀ ಮಹಾ ನೃಪರೆಂದು||

ಇಂತು ಪಡಿಯರ್ತರ್ಮೊಳ್ನುಡಿವ ಸಮಯದೊಳು|
ಮುಂತೆ ತುಂಬುರ ನಾರದರ್ಮಧ್ಯ ರಂಗದೊಳು||

ನವವೀಣೆಯಂ ಬಹುಸುಗತಿ ಸುಸ್ವರಂಬಡೆಯೆ|
ವಿವಿಧ ರಾಗಂಗಳಂನವ ಶಕ್ತಿಗಳ್ತಡೆಯೆ||

ಕೆಯ್ಮೆ ಮನವಾದ ತೆರದಿಂ ಬಾರಿಸುತ್ತಮಿರೆ|
ಸುಯ್ಗಳಂ ಮರೆದೋಲಗಂ ನಾಡೆ ಕೇಳುತಿರೆ||

ಇಂತು ತುಂಬುರನಾರದರ್ವಿರೂಪಾಕ್ಷನಂ।
ಸಂತಸದೊಳೋಲಾಡಿಸುತ್ತ ವಿಷಮಾಕ್ಷನಂ॥

ಕೇಳಿಸಿದನಂತರಂ ಕಿನ್ನರರ್ಸವಿಗೂಡಿ।
ಮೇಳೈಸುತಾರೈಸಿ ಸಭೆಗೆ ಹರುಷಂ ಮೂಡೆ॥

ಮನದೊಳಗೆ ಕಾಂತಿಯಂ ಸರಿಗೆದೆಗೆವಂದದಿಂ।
ಕೊನೆ ಮಿಂಚಿನೋಳ್ಕಾಂತಿಲತೆ ಹುಟ್ಟಿದಂದದಿಂ॥

ಬೋಳೈಸಿ ರಾಗಂಗಳಂ ಕರೆವ ಮಾಳ್ಕೆಯಿಂ।
ಮೇಳೈಸಿ ನೆರೆದ ಸಭೆ ಕರುವಿಟ್ಟ ಮಾಳ್ಕೆಯಿಂ॥

ಕಿವಿಯೊಡ್ಡಿ ಕೇಳುತಿರೆ ಚಿತ್ತಮಂ ಮಿಗೆ ಸಲಿಸಿ।
ಕಿವಿಯ ಬಳಿಸಂದುವಿಂದ್ರಿಯಚಯಂ ತಲ್ಲಣಿಸಿ॥

ಸಭೆಯೊಂದೆ ಮನವಾದ ಮಾಳ್ಕೆಯಿಂ ಕೇಳುತಿರೆ।
ಅಭವನಂ ಸುಖದ ಮರಹಲ್ಲಲ್ಲಿ ನೆರೆವುತಿರೆ॥

ಅಂತು ಮುನ್ನಿನ ಪರಿಯೊಳಿರ್ದುದಾ ದೇವಸಭೆ।
ಅಂತಿರ್ದುದಾಗಳೆವೆ ಮಿಡುಕದಾ ಪರಮಸಭೆ॥

ಇಂತು ಸಭೆಯಂ ಸುಖದ ಸ್ವೈವೆರಗಿನೊಳಗಿಟ್ಟು।
ಸಂತಸದಿ ನಾದರಸದೊಳ್ಚಿತ್ತಮಂ ಸಲಿಸಿ॥

ರಾಗದಿಂ ಕಿನ್ನರರ್ಪಾಡು ತಂದುಂ ಮೆರೆಯೆ।
ರಾಗಂಗಳಿಂದಮೃತನಾದಂಗಳಂ ಕರೆಯೆ॥

ತನತನಗೆಸೆವ ಮಧ್ಯಮಾದಿ ಭೂಪಾಳಂಗ।
ಳನು ರಾಗದೋದೆ ದೇಶಾಕ್ಷಿ ಪಲಮಂಜರಿಗ॥

ಳಾದಿಯಾಗಿರ್ದ ಬಹುರಾಗಂಗಳಲ್ಲಲ್ಲಿ।
ನಾದದಿಂ ಕೇಳಿಸೆ ಹರಂ ಸುಖದೊಳಿರಲಲ್ಲಿ॥

ನಾದದುನ್ಮತ್ತವಾದುದು ದೇವ ಸಭೆಯೆಲ್ಲ।
ನಾದಮೂರ್ತಿ ಯೆನಿಸಿದನಂದು ಗಿರಿಜೆಯ ನಲ್ಲ॥

ಏನೆಂಬೆನೋಲಗಂ ಜೊಮ್ಮೆನೊಳಗಿರ್ದಂತೆ।
ಜೇನಸರಿಯದು ಮಳೆಗೆ ನಾಡೆ ನಾಂದಿರ್ದಂತೆ॥

ರಾಗರಸದೊಳಗೆ ಮುಳುಗಿರ್ದುದೊಡ್ಡೋಲಗಂ।
ರಾಗದಿಂದಿರ್ದನಭವಂ ಸುಖದ ಮೂಲಿಗಂ॥

ಇರಲಿತ್ತ ಹಂಸೆ ಚಕ್ರಂ ಸುಖದೊಳೊಲಿದಿರ್ಪ।
ಸರಸಿಗೆ ಬಕಂ ನೋಡಲೆಂದು ಮೆಲ್ಲನೆ ಬರ್ಪ॥

ತೆರದಿಂದೆ ಬಂದು ದಕ್ಷಂ ಸಭೆಯ ನಡುವೆ ನಿಲೆ।
ಕರೆಗೊರಲನವನನೀಕ್ಷಿಸದೆ ಸುಖದಿಂದೆ ನಿಲೆ॥

ಮರೆದು ಕೇಳುತ್ತಮಿರೆ ಮನ್ನಿಸನಳಿಯನೆಂದು।
ಪೊರಮಟ್ಟನಲ್ಲಿಂದೆ ಮುಳಿದು ನಿಂದಿಸುತಂದು॥

ಪರಮಾಣು ಮೇರುವಿನ ಹೆಂಪಿಂಗೆ ಮುಳಿವಂತೆ।
ಸರಸಿ ಸಾಗರದ ಗಾಂಭೀರ್ಯಕ್ಕೆ ಮುಳಿವಂತೆ॥

ತರಗೆಲೆ ದವಾನಲನ ಕಾಯ್ಪಿಂಗೆ ಮುಳಿವಂತೆ।
ಗರುಕೆ ಕಲ್ಪದ್ರುಮದ ಸಂಪದಕೆ ಮುಳಿವಂತೆ॥

ಇರದೆ ಮಿಂಚುಂಬುಳು ದಿನೇಶಂಗೆ ಮುಳಿವಂತೆ।
ಪುರಹರಂಗಕಟಕಟ ದಕ್ಷ ಮುಳಿಯುತ್ತಿಂತೆ॥

ಬರುತೆಂದನೆನ್ನನಪಮಾನಂಗೆಡಿಸಿದಂತವನ।
ನಿರದೆ ಭಂಗಿಸುವೆ ನಾನೈದೆ ಹೆರೆಸೂಡಿವನ॥

ನೆಂದು ತನ್ನಾಶ್ರಮಕೆ ಗಳಗಳನೆ ನಡೆತಂದು।
ನೊಂದು ನುಡಿದಂ ವಿಶ್ವಕರ್ಮಂಗೆ ನೀನೊಂದು॥

ಯಾಗಮಂಟಪವನೆತ್ತಿಂದು ಪೇಳ್ವನಿತಕ್ಕೆ।
ಬೇಗದಿಂ ನೆಗೆದುಪಾಗಳೆ ಭೂಮಿವಳೆಯಕ್ಕೆ॥

ಭೂಮಿಗೆ ವಿಚಿತ್ರವಾದುದು ಮಂಟಪಂ ನೋಡೆ।
ಹೋಮಕುಂಡಂ ಸುಡುವ ಮುಳ್ಳೆಳ್ಳುಗಳ್ಕೊಡೆ॥

ನಡುವೆ ಯೂಪಸ್ತಂಭ ವಿಂಬಿನಿಂ ಮೆರೆವುತಿರೆ।
ಕೊಡದಿಂದ ತಮ ತಮಗೆ ನವಘೃತವ ನಡುಕುತಿರೆ॥ ೧೫೦

ಕರೆಸಿದಂ ಪೆಣ್ಮಕ್ಕಳಳಿಯಂದಿರಂ ಕೂಡೆ।
ಬರಿಸಿದಂ ಹರಿಯಜಪುರಂದರರುಮಂ ಕೂಡೆ॥

ಧಿಗಧೀಶರಂ ತ್ರಿದಶರಂ ದಿವ್ಯ ಮುನಿಗಳಂ।
ಜಗದೊಳುಳ್ಳರಸುಮಕ್ಕಳನೆಸೆವ ಮನುಗಳಂ॥

ದ್ವಿಜಮುಖ್ಯರಂ ಬರಿಸಿ ನಿಜವರ್ಗಮಂ ತರಿಸಿ।
ದ್ವಿಜರಾಜನುಂ ರವಿಯುಮಂ ವಸುಗಳಂ ಬರಿಸಿ॥

ಪುರಹರಂ ಗಿರಿಜೆ ಗಣನಾಯಕರು ಹೊರಗಾಗೆ।
ನೆರಪಿದಂ ಪಾತಕಜನವ ನವನಿ ಬೆರಗಾಗೆ॥

ಹೊರಗೆ ಕಾಪಿಟ್ಟು ಶಕ್ರಾದಿ ದಿಕ್ಪಾಲರಂ।
ನೆರೆ ಪೇಳ್ದು ತಾನಲ್ಲಿ ಕೂಡೆ ಭೂಪಾಲರಂ॥ ೧೬೦

ಬಂದು ದಕ್ಷಂ ಬ್ರಹ್ಮಸಭೆಗೆ ಕೈಮುಗಿದೆನಗೆ।
ಒಂದು ಯಾಗವನೊಡರ್ಚುವುದಕ್ಕೆ ನಿಮನಿಮಗೆ॥

ಕರುಣಿಪುದನುಜ್ಞೆಯಂ ಕುಡುವುದೆಂದೆನುತಮಿರೆ।
ವರಮುನಿ ವಧೀಜಿ ನುಡಿದಂ ಸಭೆಯು ನಡುಗುತಿರೆ॥

ಉಸುರಿಲ್ಲದೊಡಲಂತೆ ರವಿ ಪುಗದ ನಭದಂತೆ।
ಶಶಿಯಿಲ್ಲದಿರುಳಂತೆ ಹವಿ ಪುಗದ ಮುಖದಂತೆ॥

ಹರನಿಲ್ಲದೊಪ್ಪದೀ ಯಾಗವನುರಾಗದಿಂ।
ಕರೆದು ಬಿಜಯಂಗೆಯ್ಸಿ ತರ್ಪುದತಿವೇಗದಿಂ॥

ಎನೆ ದಕ್ಷನುರಿಯೊಳಗೆ ತುಪ್ಪವಂ ಹೊಯ್ದಂತೆ।
ಮುನಿದು ಭುಗಿಲೆನುತೆ ನುಡಿವರ ಸಭೆಯ ಮುಂತೆ॥

ಹರನೀ ಸಭೆಯ ನಡುವೆ ಕುಳ್ಳಿರಲು ಯೋಗ್ಯನೇ।
ಗೊರವನಂ ಪೆಸರ್ಗೊಳದಿರಿಲ್ಲಿಗವ ಭಾಗ್ಯನೇ॥

ಸುರರಸ್ತಿಮಾಲೆಯಂ ಕೊರಲೊಳಿಟ್ಟಿರ್ಪನಂ।
ಕರೆವರೇ ಛೀ ಪುಲಿಯ ತೊವಲನುಟ್ಟಿರ್ಪನಂ॥

ಮರೆದು ಮಗಳಂ ಕೊಟ್ಟೊಡನಿತರಿಂದಾ ಧೂರ್ತ।
ಮರೆವನಪ್ಪನೆ ಸಿತಗನಿನ್ನೆಮಗೆ ಬೇಡಾತ॥

ನುಡುಗು ಹೋ ಮುನಿಪತಿ ನಿನಗೀವ್ವೊಂದು ಮಾತೆಂದು।
ನುಡಿಯಲ್ದಧೀಚಿಗಂಕುರಿಸೆ ಕೋಪವದೆಂದು॥

ಇಟ್ಟೊರಸಿ ಕಳೆಯಲ್ಬಗೆದನವನ ಜನ್ಮಮಂ।
ನೆಟ್ಟು ಹರಗಲ್ಬಗೆದನವನ ಕುಲವೆಲ್ಲಮಂ॥

ನೋಡಿದವನಾಗತ ಜ್ಞಾನದಿಂದಂ ನಿಂದು।
ಮಾಡುವವನೊಬ್ಬನುಂಟೆಂದು ಸೈರಿಸಿ ನಿಂದು॥

ಕೇಳಿಲೆವೊ ದಕ್ಷ ನೀನಂಜದೆನ್ನಯ ಮುಂದೆ।
ಭಾಳಾಕ್ಷನಂ ಸ್ವಾಮಿಯಂ ದೇವನಂ ಕುಂದೆ॥

ನುಡಿಯಃದಕ್ಕೇನದಕ್ಕೇನೆಲವೊ ಕುಳ್ಳಿರ್ದೈ।
ಉಡುಕುಳಿಗಳಂ ದಿಟಂ ಗಡ ದೈವವೆಂದಿರ್ದೈ॥

ಕುನ್ನಿಗಳನೇ ನೆಚ್ಚಿ ಜನ್ಮಮಂ ತೊಡಗಿದ್ದೈ।
ಇನ್ನೇನು ಹಸನಾಯ್ತು ಹರಣಮಂ ನೀಗಿದ್ದೈ॥

ಇವನ ನುಡಿಯಂ ಕೇಳ್ದು ಮರುಮಾತು ಕುಡದವರ್ಗೆ।
ಶಿವಭಕ್ತಿಯಾಗದಿರ್ಕೆಂದುಮಿಂತೀ ದ್ವಿಜರ್ಗೆ॥

ಈ ಪಾತಕನ ಮುಖಂ ಕಡೆಮುಟ್ಟದಿರ್ಕೆಂದು।
ಶಾಪಮಂ ಕೊಡೆ ಕೇಳ್ದರಿಲ್ಲಿ ಎಮಗೇನೆಂದು॥

ಆಗಳ್ಮಹಾ ಮುನಿ ದಧೀಚಿಯೊಡನೆದ್ದವರು।
ರಾಗದಿಂದರುವರುಂ ಶಾಪವರ್ಜಿತರವರು॥

ಉಪಮನ್ಯು ದೇವಲನಗಸ್ತ್ಯ ಗೌತಮರೆಂದು।
ಕುಪಿತದಿಂದಂ ಬರೆ ವಶಿಷ್ಠನುಂ ಭೃಗುವಂದು॥

ನಡೆದಂ ದಧೀಚಿಮುನಿ ತನ್ನಾಶ್ರಮಕ್ಕೆಂದು।
ಮೃಡನರಸಿಗರುಪಲಿತ್ತಂ ನಾರದಂ ಬಂದು॥

ತಂದೆ ಮಾಡುವ ಜನ್ನಮಂ ನೋಡಲೆಂದಗಜೆ।
ಇಂದುಮೌಳಿಗೆ ಬಿನ್ನಪಂ ಮಾಡಲಾ ಗಿರಿಜೆ

ಬೇಡವಂ ಬಗೆವನಲ್ಲಲೆ ಗೌರಿ ಹೋಗದಿರು।
ನಾಡೆ ಮೂರ್ಖಂ ಜರಿವನೆಲೆ ಭಕ್ತೆ ಹೋಗದಿರು॥

ಬೇಡೆಂದು ಬೆಸಸುತಿರೆ ಕೇಳದೆ ಮಹಾದೇವಿ।
ಕೂಡೆ ಕರೆಸಿದಳಮೃತಕರ ಮುಖಿಯರಂ ದೇವಿ॥

ಕರೆಯಿಸಲ್ ಬಂದರ್ವಿದಗ್ಧೆಯರ್ಮುಗ್ಧೆಯರ್।
ಹರನರಸಿಯೊಡನೈದೆ ಬಂದರತಿ ನೀರೆಯರ್॥

ನೆರೆದು ಬಂದರ್ನಲಿದು ಕನ್ನೆಯರ್ ಚೆನ್ನೆಯರ್।
ಹರುಷದಿಂ ಸಲೆ ನಲಿದು ಬಂದರಾ ನೀರೆಯರ್॥

ಕಳಹಂಸಯಾನದಿಂ ನಡೆದು ಬಂದರ್ಸತಿಯು।
ರಳಿಕುಂತಳೆಯರಲ್ಲಿ ರತಿಯ ರೂಪಾನ್ವಿತೆಯು॥

ಪತಿರಹಿತನರಸಿಯೊಡನೈತಂದರೊಪ್ಪದಿಂ।
ಅತಿಶಯದಿ ಮಿಗೆ ಸಿಂಗರಂ ಮಾಡಿ ಬೇಗದಿಂ॥

ಅಸಮಾಕ್ಷನರಸಿ ಚಿತ್ತೈಸೆ ಮಿಗೆ ಹರುಷದಿಂ।
ಒಸೆದು ಬಿಜಯಂಗೆಯ್ವುದೆನೆ ದೇವಿ ರಾಗದಿಂ॥

ನಂದಿಕೇಶ್ವರನ ಬೆನ್ನೊಳು ಸುಖಾಸನವಿತ್ತು।
ಇಂದುಮುಖಿ ಕೆಲಬಲದ ಸತಿಯರ್ಗೆ ಮೊಗವಿತ್ತು॥

ನಡೆವಾಗಳಬಲೆಯರುಘೇ ಜಾಂಗು ಬೊಲ್ಲೆಂದು।
ನಡುವೆ ಸಂದಣಿ ರಂಭೆ ಹೆರೆಸಾರ್ದು ಬಾರೆಂದು॥

ಕೆಲಬಲದಿ ನಡುವೆ ನಡುವೂರ್ವಸಿಗಳೆಂದೆಂಬ।
ಎಲೆಲೆ ಖೇಚರಿಯೆಂದು ದೇವಿಯವಧಾರೆಂಬ॥

ಚಮರಮಂ ಸ್ವೈತಿಕ್ಕು ಲಕ್ಷ್ಮಿ ಸ್ವೈತಿರುಯೆಂಬ।
ಅಮರ್ದು ಶಚಿ ನೀ ನೋಡಿ ಸೀಗುರಿಯನಿಕ್ಕೆಂಬ॥

ಸಸಿನೆತ್ತು ಬೆಳುಗೊಡೆಗಳಂ ಚಂದ್ರವಧುವೆಂಬ।
ಒಸೆದು ಬರುತಿರ್ಪ ಕಿನ್ನರಿಯರಂ ಪಾಡೆಂಬ॥

ಕಳಕಳ ನಿನಾದಂಗಳೊಪ್ಪೆ ಸತಿಯರ ನಡುವೆ।
ಸುಳಿಪ ಗಂಧರ್ವ ಲಲನಾಕೋಟಿಗಳ ನಡುವೆ॥

ನಡೆತಂದಳಿಂದುವಿನ ಬೀಡು ಪೊರಮಟ್ಟಂತೆ।
ನಡೆತಂದಳೆಳೆವಳ್ಳಿಬನವೊಲ್ದು ಬರ್ಪಂತೆ॥

ಸಕಲ ದೇವತೆಗಳಧಿದೇವತೆಯು ಬರುತಿರ್ದ।
ಅಕಳಂಕ ಚಂದ್ರಧರನರ್ಧಾಂಗಿ ಬರುತಿರ್ದ॥

ಇಂತು ಬರೆವರೆ ಕಾಣಲಾಯ್ತು ದಕ್ಷನ ನಾಡು।
ಮುಂತೆ ಬರೆವರೆ ಮುಂದೆ ನಿಂದುದಾತನ ಬೀಡು॥

ಬಂದು ಪಟ್ಟಣವಂ ವಿಳಾಸದಿಂ ಪುಗುತಿರಲ್।
ಮುಂದೆ ಇದಿರ್ಗೊಂಬರಿಲ್ಲಿದೇನೆನುತ್ತಲಂದು॥

ಒಡನೈದಿಬರ್ಪ ಸಂಗಡದ ಸತಿಯರ್ವೆರಸಿ।
ನಡೆತಂದು ನಂದಿಯಿಂದಿಳಿದು ಪುರಹರನರಸಿ॥

ರಾಹುವಿನ ಮುಂದೆ ಶಶಿಕಳೆ ಬಂದು ನಿಲುವಂತೆ।
ಸಾಹಸದ ವಹ್ನಿರಿಯ ಮುಂದೆ ಲತೆ ನಿಲ್ಪಂತೆ॥

ತಂದೆ ದಕ್ಷನ ಮುಂದೆ ರುದ್ರಾಣಿ ನಿಲುತಿರಲ್।
ಮುಂದುಗಾಣದ ಕೋಪಿ ನೋಡದೆ ತಿರುಗುತಿರಲ್॥

ಎತ್ತಲಾ ದೇವಿ ಬಂದತ್ತತ್ತ ತಿರುಗುತಿರೆ।
ಸುತ್ತಿಬರೆ ದಕ್ಷಸತಿ ವಿಮುಖನಾಗುತ್ತಮಿರೆ॥

ಮುಗಳೆಂಬ ಸಲುಗೆಯಿಂದಂ ಮುಂದೆ ನಿಲುತಮಿರೆ।
ಬಗೆಯದಗಜೆಯನಪಂ ಬಯ್ಯೆ ಸಭೆ ಕೇಳುತಿರೆ॥

ಹೇಳಬಾರದು ನರಕಿ ಪಾಪಿ ಸುಡು ನುಡಿಗಳಿಂ।
ಭಾಳಾಕ್ಷನಂ ನಿಂದಿಸಿದನೊಲ್ಲ ಪರಿಗಳಿಂ॥

ತನ್ನನೇನೆಂದೊಡಂ ತಾನದಕೆ ಸೈರಿಸಿದ।
ಅನ್ಯಾಯದಿಂ ಶಿವನನೆಂದೊಡೆ ದೇವಿ ಕೋಪಿಸಿದ॥

ಕೊಳಗೊಳಗಳಲ್ದುಳ್ಳಟೆಲ್ಲಳ್ಮಹಾದೇವಿ।
ಹಳವಳಿಸಿ ಕಣ್ಗೆಟ್ಟು ಕರಗುತಿರ್ಪಳ್ದೇವಿ॥

ಸುಯ್ಯೊಡನೆ ಕಿಡಿ ಪೊರಮಡುತ್ತಮಿರೆ ಸುಯ್ವುತುಂ।
ಕೆಯ್ಯಂ ಮೊಗದೊಳಿಟ್ಟು ತಲೆವಾಗಿ ಸುಯ್ವುತುಂ॥

ಮೆಲ್ಲನೆಚ್ಚತ್ತು ಚಿಂತಿಸಿ ಕುಪಿತೆ ನೋಡಿದಳ್।
ಸಲ್ಲಲಿತೆ ತನ್ನ ಮನದೊಳಗೆ ಮಾತಾಡಿದಳ್॥

ಸೈರಿಪೆನೆ ಹರಣದೊಡೆಯನ ನಿಂದೆಗೈದಪನ।
ಧಾರಿಣಿಗಕೀರ್ತಿ ಪಿತೃವಧೆಗಿಂತು ಸಿಲ್ಕಿದೆನೆ॥

ಹರನಿಂದೆಗೈದನಂ ಕೊಲ್ವುದಿಲ್ಲಾ ಸಾವು।
ಅಪವರಿಸಲಾಗದಿಂತನುಮಾನವಿಂತೇವು॥

ಎನುತಿರಲ್ಕೋಪ ಉಬ್ಬರಿಸಿ ತನುವಂ ಮೀರಿ।
ವನಿತೆ ಕಣ್ಣಂ ಮುಚ್ಚಿ ನೆನೆದಳಭವನ ಸೀರಿ॥

ಒಳಗಣಾತ್ಮಜ್ಯೋತಿಯಿಂಪೆ ತನ್ನಯ ಮುಸುಕೆ।
ಬೆಳಗಾದಳಾ ಸಭೆಯ ಕಣ್ಗೆ ತಮಮಂ ಮುಸುಕೆ॥

ಆಗಳಾ ಸಭೆ ಮರುಗಿ ಕೌತುಕಂ ಬಡುತಮಿರೆ।
ಮೇಗರಿವವರ್ಕೆಲರ್ಪೊಲ್ಲಪೆಂದೆನುತಮಿರೆ॥

ಪೂಗಿಡುವಿನಲ್ಲಿ ಬೇಗೆಯುಸಿಕ್ಕಿದಂತಾಗೆ।
ಪೂಗಣೆಯನಡಸಿ ದಳ್ಳುರಿ ಮುಸುಕಿದಂತಾಗೆ॥

ಮಲ್ಲಿಗೆಯ ಬಿರಿಮುಗುಳನುರಿ ಕೊಂಡ ತೆರೆನಾಗೆ।
ಅಲ್ಲಲ್ಲಿ ಪುರಜನಂ ಬಿಸುಸುಯ್ದು ಬೆರಗಾಗೆ॥

ಒಡೆವಂದ ಕೆಳದಿಯರ್ಥರೆಯೊಳಸುವಂ ಹೊಸೆದು।
ಮೃಡನರಸಿಯಂ ನಾಣಡಡಿಗಡಿಗೆ ಬಸವಳಿದು॥

ಬಳಿಸಂದವರ್ಕೆಲರ್ಬಳಲುತಿರ್ಪರ್ಕೆಲರ್।
ಕರಗುತಿರ್ಪರ್ಕೆಲರ್ ಕೊರಗುತಿರ್ಪರ್ಕೆಲರ್॥

ಕೆಲರೇನುವರಿಯದಂತಲ್ಲಿ ಬರೆದಂತೆ ನಿಲೆ।
ಕೆಲರೊಲ್ದ ಪರಿಗಳಿಂದೊದರೆ ಕಳವಳಿಸಿ ನಿಲೆ॥

ತನಗೆಂತು ಜೀವಿಸುವ ಪರಿಯೆನುತ್ತಂತಂತು।
ನೆನೆನೆನೆದಳಲ್ದು ಬಿಸುಸುಯ್ಯುತಂತಿರಲ್ಕಂತು॥

ಇತ್ತಲಂಬಿಕೆ ತನ್ನ ಕೋಪದೋಳ್ತಾನೆ ಸಲೆ।
ಅತ್ತಲಭವಂ ಮನಂ ಮರುಗಿ ದುಗುಡದೊಳು ನಿಲೆ॥

ತಾನೆ ಕೈಲಾಸಸುಖವೆಲ್ಲವಂ ಮರೆದಿರ್ದ।
ಏನುವುಮ್ಮಳಿಸಿ ದುರ್ಮನದಿಂದಿರುತ್ತಿರ್ದ॥

ನಂದೀಶನಂ ಕರೆದಿದೇನು ಸೋಜಿಗವಯ್ಯ।
ಇಂದುಮುಖಿ ಬೇಡೆಂದಡೋದ ಫಲದಿಂದಯ್ಯ॥

ಸೊಗಸದೀ ಕಿನ್ನರರ ಗೀತವಿಂದೇಕಯ್ಯ।
ಬಗೆವುಗದು ನೀವಿಲ್ಲಿ ನುಡಿವ ಮಾತೇಕಯ್ಯ॥

ಅನಿಮಿತ್ತವಿಂತಿವೇಕಾಗುತಿರ್ದಪುದಯ್ಯ।
ವನಿತೆ ಬೇಡೆನೆ ಹೋದಳೇನಪ್ಪುದೆಂತಯ್ಯ॥

ಎನುತಿರಲ್ನಂದಿಕೇಶ್ವರನಲ್ಲಿ ಬರುತಿರ್ದ।
ನನುಸುಯ್ಯನೆಂದಿನಂತಲ್ಲದೈತರುತಿರ್ದ॥

ನೆಳಲ್ವ ಕಿವಿ ಬರಿಮೊಗಂ ಬಳಲ್ದ ತನು ದುಮ್ಮಾನ।
ವಳಲ್ದ ಮನದುತ್ಸವಂ ಕಳಲ್ದಂಗದಿಂ ಧ್ಯಾನ॥

ವೀಶನಂ ಮುಟ್ಟೆ ನೆನಹವೆ ಜೀವವಾಗಿ ಬರೆ।
ಭಾಸುರ ವಿಳಾಸವೆಲ್ಲವನೊಕ್ಕು ತಾನೆ ಬರೆ॥

ದೇವಿ ಇಲ್ಲಾದುಮಿಲ್ಲೇನಚ್ಯುದೇನೆನಲು।
ದೇವ ಬಿನ್ನಪವೆಂದೊಡಭವನಾಲಿಸುತಿರಲು॥

ತಂದೆಯೆಂದಗಜೆ ದಕ್ಷನ ಮುಂದೆ ಪೋಗಿ ನಿಲೆ।
ನಿಂದಿಸಿದನೀಶ ನಿಮ್ಮಂ ದಕ್ಷನವನಬಲೆ॥

ಕೇಳಲಾರಧೆ ತನಗೆ ತಾಂ ಕೋಪಿಸಿದಳೆಂಬ।
ಭಾಳಲೋಚನೆ ನಿಮ್ಮ ನಿಜಕೆ ಸಂದಳುಮೆಂಬ॥

ನುಡಿಯೊಡನೆ ಮಸಗಿ ಘುಡಘುಡಿಸುತಿರ್ದುದು ಕೋಪ।
ಪೆಡೆಗೊಂಡುದಿಂದುಧರನೊಳಗೆಲ್ಲವನುತಾಪ

ವಾಗಳಾ ನಂದೀಶನಂ ಪತ್ತಿದುದು ಮೌನ।
ವಾಗಳ್ಗಣಂಗಳಿಗೆ ಮುತ್ತಿದುದು ದುಮ್ಮಾನ॥

ವಲ್ಲಿ ಭಿತ್ತಿಯ ಚಿತ್ರ ಕಳೆಗುಂದಿ ತಾನಿರ್ದು।
ವಲ್ಲಿ ಪುತ್ಥಳಿಗಳೆಲ್ಲಂ ಸೊಂಪುಗೆಟ್ಟಿರ್ದು॥

ವಲ್ಲಿಯೋದುವ ಶುಕಾಳಿ ಮೂಗುವಟ್ಟಿರ್ದು।
ವಲ್ಲಿ ಸಲಹಿದ ಹಂಸೆಮಾಲೆ ನಸೆಗೆಟ್ಟಿರ್ದು॥

ವಲ್ಲಿ ಬೆಳಸಿದ ಲತಾವಳಿ ತಾನು ಕೊರಗುತಿರೆ।
ಅಲ್ಲಿಯೋವಿದ ಜನಂ ಜವ್ವನಂಗೆಡುತಮಿರೆ॥

ಭೋಗಂಗಳೊರ್ದೆಸೆಗೆ ಭಾಗಂಗಳೊರ್ದೆಸೆಗೆ।
ರಾಗಂಗಳೊರ್ದೆಸೆಗೆ ಯೋಗಮುವದೊಂಸೆಗೆ॥

ಸಂಪದವನೊರ್ದೆಸೆಗೆ ಭೂವನಿತೆಯೊರ್ದೆಸೆಗೆ।
ಸೊಂಪುಗಳದೊಂದೆಸೆಗೆ ಲಾವಣ್ಯವೊಂದೆಸೆಗೆ॥

ತಮುತಮುಗೆ ಸುಯ್ಯುತಂ ಮರುಗಿ ಮೊರೆಯಿಡುತಿರಲು।
ಶಿವನಂತರಂಗದಿಂ ಕೋಪವಡರುತ್ತಿರಲು॥

ನಂದೀಶನರಿದು ಭಯದಿಂದೆ ಹಿಮ್ಮೆಟ್ಟುತಿರೆ।
ನಿಂದ ಗಣಸಂಕುಳಂ ಹರೆಸಾರ್ದು ನಡುಗುತಿರೆ॥

ಕುಪಿತನಾದಂ ದೇವನಿನ್ನಾರೊ ಜೀವಿಪರು।
ವಿಪರೀತವೇನಪ್ಪುದಿದನಾರೊ ಭಾವಿಪರು॥

ಮುಳಿದೊಡೆ ಮಹಾಪ್ರಳಯವೊಬ್ಬರುಳಿವವರಿಲ್ಲ।
ತಿಳಿವೊಡರಿದುಗ್ರನಿರ್ದಿರವ ತಾನೇ ಬಲ್ಲ॥

ನೆನುತೆಲ್ಲರಂಜಿ ಕಣ್ಮುಚ್ಚೆ ಪರಮೇಶ್ವರಂ।
ನೆನೆಯಲರಿದೆನಿಪ ರೂಪಿನೊಳಿರ್ದನೀಶ್ವರಂ॥

ಇರೆ ದೇಹದೊಳು ಸುತ್ತಿ ಹೊತ್ತಿ ಹೊಗೆದುದು ಕೋಪ।
ಉರವಣಿಸುತೊಳಗೊಳಗೆ ಕುಂಭಿಕ್ಕಿದುದು ಕೋಪ॥

ವಡಿಸಿ ನೆಗೆದುದು ಭಾಳಲೋಚನನವ ಕೆಲದಿಂದೆ।
ಘುಡಿಘುಡಿಸಿತದು ಮಸಗಿತದು ಬೆಮರನೆವದಿಂದೆ॥

ಕೋಪವೆಲ್ಲಂ ನೆರೆದು ಬಂದೊಂದೆಡೆಗೆ ಬಂದು।
ರೂಪಾಗಲನುಗೆಯ್ಯಲದರ ಮಧ್ಯದೊಳೊಂದು॥

ನೋಡಬಾರದ ಥಳಥಳಿಪ್ಪ ತೇಜೋಮೂರ್ತಿ।
ಕೂಡೆ ಪುಟ್ಟುತ್ತಿರ್ದುದಭವನಘಟನ ಮೂರ್ತಿ॥

ಭುಗಿಭುಗಿಲ್ ಛಿಟಿಛಿಟಿಲ್ ಬುಭುರ್ಗಿಲ್ ಭುಗಿಲೆಂದು।
ಭುಗಿಛಿಟಿಲ್ ಭುಗಿಛಿಟಿಲ್ ಛಿಚ್ಛಿಟಿಲ್ ಭುಗಿಲೆಂದು॥

ಧಗಿಲೆಂಬ ನುಡಿಗೆ ಧರಣೀತಳಂ ಬಿರಿಯುತಿರೆ।
ಭುಗಿಲೆಂಬ ರಭಸಕಂಬರತಳಂ ಸಿಡಿಪುತಿರೆ॥

ಹರಿಬೊಮ್ಮರಿರ್ದೆ ಬಿರಿಯೆ ಕುಲನಗಂಗಳ್ಕುಸಿಯೆ।
ಪರಸಮಯಿಗಳ್ ಜರಿಯೆ ಜಲಧಿ ಕುಕ್ಕುಳ್ಕುದಿಯೆ॥

ರವಿರಥಂ ದೆಸೆಗೆಡಲ್ ಗಣಪತಿಗುಹರ್ಬೆದರೆ।
ಭುವನಂ ಕಿವುಡುವಡಲ್ ಗಣಸಮಿತಿಗಳ್ಕಿದರೆ॥

ಗಗನದೋಳ್ಪರ ಸಿಡಿಲ್ಮೂರ್ತಿಗೊಂಡೊಗೆವಂತೆ।
ಮಿಗೆ ಭಾಳಲೋಚನಂ ರೂಪುಗೊಂಡೊಗೆವಂತೆ॥

ಕಾಳಕೂಟದ ನಗದೊಳೊಗೆದ ಕೇಸರಿಯಂತೆ
ಕಾಲಾಗ್ನಿಯಿಂದೆ ದಳ್ಳುರಿ ಭುಗಿಲನೊಗೆವಂತೆ॥

ಬೆಳಗು ಮೂಲೋಕಮೋಳ್ಕೊತ್ತಳತ್ತೊಳಗೆ ಕಡುಪಿಂಪೆ।
ಘಳಿಲನೊಗೆದಂ ವೀರಭದ್ರಂ ನಿಟಿಲತಟದಿಂದೆ॥

ಏಕಜಡೆಲಿಂಗಂ ಶಿರೋಮಾಲೆಗಳ್ಕೊತ್ತಳಗೆ।
ಭೀಕರಮೆನಿಪ್ಪ ಕೆಂಗಣ್ಮೀಸೆಗಳ್ಗೆಳಗೆ॥

ಕುಂಡಲಂ ಕೋರೆದಾಡೆಗಳೊಪ್ಪಿ ತೋರುತಿರೆ।
ಚಂಡಾಂಶು ವೀರಫಳಕಂ ತೊಡರ್ಮೆರೆವುತಿರೆ॥

ಸಿಂದಂ ರಜತಗಿರಿಗೆ ಕೈಕಾಲ್ಗಳೊಗೆದಂತೆ।
ಮಂದರಂ ಮಸಗೆ ಕೋಪದಿ ರೂಪುಗೊಂಡಂತೆ॥

ನೋಡಿರೇ ಭಾಳನ ಮನಂ ಹೆತ್ತ ಶಿಶುವಿಂಗೆ।
ಮಾಡಿದರ್ಜಾತಕರ್ಮವನಾಗಳಾತಂಗೆ॥

ನಾಮಕರಣಂ ವೀರಭದ್ರನೆಂಬುದು ತನಗೆ।
ನೇಮಿಸಿತು ಬಾಯ್ವೆಣ್ಣೆ ಬ್ರಹ್ಮಾಂಡನದು ತನಗೆ॥

ತೊಟ್ಟಿಲುಂ ತುಂಬಿನಾಕಾಶವಾದುದು ನೋಡ।
ಕಟ್ಟಿದ ಗುಣಂ ಪ್ರತಾಪ ಯಶಸ್ಸುಗಳ್ನೋಡ॥

ತೂಗುವ ಪ್ರಳಯ ಕೋಲಾಹಲ ಗಣಾಧಿಪರ್
ಜೋಗುಳಂ ಪಾಡುವರ್ಬೀರಸಿರಿಮಾರಿಯರ್॥

ಬಾಲಾಭರಣಮೆ ಬೊಬ್ಬಿಡುವ ತಲೆಗಳ ಮಾಲೆ।
ಬಾಲತ್ವದಾಟವದು ಮಖದ ಸುರುಪುವ ಲೀಲೆ॥

ಎಂದೊಡವನೆಂತು ಪೊಗಳ್ದಪೆನಿನ್ನು ವೀರಮಂ।
ಇಂದು ಮೌಳಿಯ ಸಕಲ ಸಾಮರ್ಥ್ಯಸಾರಮಂ॥

ನೋಪ ನೋಡಲ್ಬೆಳೆದ ನೆಲೆಲಿ ಬ್ರಹ್ಮಾಂಡಮಂ।
ಕೂಡೆ ಬಳೆದಂ ಬಳೆದ ನಮಮ ಬ್ರಹ್ಮಾಂಡಮಂ॥

ಮೀರಿ ನೋಡಿದರೆ ಮತ್ತಾ ಪರಿಗಳಂ ಕಳೆದ ।
ನೂರುಮಡಿ ಮಿಗೆ ಶಂಭು ತಲೆದೂಗುತಿರೆ ಬಳೆದ ॥

ಉಳ್ಳ ಕೋಪಂ ವೀರಭದ್ರನಂ ನೆಲೆಗೊಂಡು ।
ಉಳ್ಳಿತುಳಿದುದು ಶಾಂತಿ ಶಂಕರನ ನೆಡೆಗೊಂಡು ॥

ತನಗೆ ಸಿಸು ದಕ್ಷಯಾಗಕ್ಕೆ ಪುಟ್ಟಿದ ಮಾರಿ ।
ತನಗೆ ಚಿಣ್ಣಂ ಕಾಲನೆಂಬವನಗೆ ಉರಿಮಾರಿ ॥

ಇಂತೆಸೆವ ತೀವ್ರದ ಮಹಾವೀರನಂ ಕಂಡು ।
ಚಿಂತಿಸಿದನೀಶ್ವರಂ ತನ್ನೊಳ್ಳಯಂಗೊಂಡು ॥

ಏಕೆ ಕೋಪಿಸಿದೆ ನಿವನೇಕೆ ಹುಟ್ಟಿದನೆಂದು ।
ಲೋಕೇಶ್ವರಂ ನಾಡೆ ಕೌತುಕಮನಾಳ್ದಂದು ॥

ತಲೆದೂಗಿ ವೀರಭದ್ರನ ವದನಮಂ ನೋಡಿ ।
ನಲಿದು ಮನದೊಳಗೆ ತೂಪಿರಿದ ನೊಲವಿಂ ಕೂಡಿ ॥

ಕರೆದು ಬೆಸಸಿದನಭವನಾ ವೀರಭದ್ರಂಗೆ ।
ಪರಸಮಯಸಂತಾನ ತಿಮಿರಮಾರ್ತಾಂಡಂಗೆ ॥

ಕುರಿದಕ್ಷನಂ ಪಿಡಿದು ಜನ್ನಮಂ ಸುಟ್ಟುರುಪಿ ।
ತರಿದಿಕ್ಕು ಮಾರಾಂತರಂ ಕಾಲನೋಳ್ನಿರಪಿ ॥

ಎಂದು ಬೆಸಸಲ್ ಭದ್ರಕಾಳಿಯೊಡನೈತರಲ್ ।
ಅಂದು ಕೋಟಾಕೋಟಿ ರೋಮಜರ್ನಡೆತರಲ್ ॥

ಉರದ ಬಾಯವರಲ್ಲಿ ಕರದ ಕಣ್ಣವರಲ್ಲಿ ।
ಶಿರವ ಕಾಲವರಲ್ಲಿ ಚರಣಮುಖದವರಲ್ಲಿ ॥

ಬೆನ್ನಬಾಯರ್ಕೆಲರ್ ಕುಡಿದಾಡೆಯರ್ಕೆಲರ್ ।
ಕೆನ್ನೆಯುಗುರರ್ಕೆಲರ್ ಕಡು ನಿಡಿಯವರ್ಕೆಲರ್ ॥

ಗಗನದೊಳ್ನಡೆಯುತಂ ಕಡಲಂ ಕಲುಂಕುತಂ ।
ದಿಗಿಭವಂ ಕೆಡಪುತಂ ಪೊಡವಿಯಂ ಹಿಳಿಯುತಂ ॥

ರವಿರಥವನೆಡಹುತಂ ರಾತ್ರಿಪನನರೆವುತಂ ।
ಪವನಮಂ ಪಿಡಿಯುತಂ ಭಗಣಮನೊಡರ್ಚುತಂ ॥

ಪೊರಮಟ್ಟುದಲ್ಲಿ ವಸುಮತಿಯೆ ಬೆಸನಾದಂತೆ ।
ಪೊರಮಟ್ಟುದುಗ್ರಗಣತತಿ ಗಗನ ಬಿದ್ದಂತೆ ॥

ದುಂದುಭಿಗಳಲ್ಲಲ್ಲಿ ಬೆಳ್ಗೊಡೆಗಳೆತ್ತಿ ಬರೆ ।
ಸಂದಣಿಸಿ ಕೈದುಗಳ್ಬೆಳಗ ನುಗುಳುತ್ತಮಿರೆ ॥

ಈಬಂದನೆಲೆಲೆ ಭಾಳೇಕ್ಷಣನ ಸುತನೆಂಬ ।
ಈಬಂದನಪ್ರತಿಮನತುಳ ಬಲನೆಂದೆಂಬ ॥

ಹಿರುದನಿಯು ಕಹಳಾರವಂ ದೆಸೆಗೆ ಪರಿಯುತಿರೆ ।
ತುರುಗಿದನಲಧ್ವಜಂ ಗಗನದೊಳ್ಕುಣಿವುತಿರೆ ॥

ಮುಸಗಿ ಕಾಳಾನಲನ ಹೊರಬೀಡ ಬಿಟ್ಟಂತೆ ।
ವಸುಧೆಗುಬ್ಬುಸವ ಸಂಜಿನ ಬನಂ ನಡೆವಂತೆ ॥

ಅಚ್ಚರಿಯ ವೀರಭದ್ರನ ಬೀಡು ನಡೆಯುತಿರೆ ।
ಮಚ್ಚರಿಪ ದಕ್ಷಪುರವಲ್ಲಿ ನಸುದೋರುತಿರೆ ॥

ಕಂಡು ಕೈವೀಸಿದಂ ವೀರಭದ್ರಂ ಹಾದಿ ।
ಗೊಂಡು ಹರಿದುದು ಬೊಬ್ಬಿಡುತೆ ಸಕಲ ಭೂತಾದಿ ॥

ಗಣನಿಕರವೈದಿ ಕೋಂಟೆಯನಾಕ್ಷಣಂ ಮುತ್ತಿ ।
ಸೆಣಿಸಿ ಬಿಡದಾಯ್ದುಮುಲದುರಿಯ ಹಳವಿಗೆ ಎತ್ತಿ

ಬೊಬ್ಬಿಡಲು ಯಾಗಮಂಟಪವದಿರ್ದು ಸಭೆ ಕೆದರೆ ।
ಬೆಬ್ಬಳಿಸಿ ದಕ್ಷನಬ್ಬರ ವಿದೇನೆನುತೊದರೆ ॥

ಪೋಗಿಂದ್ರ ಹೋಗಗ್ನಿ ಹೋಗಿ ದಿಕ್ಪಾಲರಿರ ।
ಹೋಗು ಮುರಹರ ನೂಂಕಿ ನಡೆಯಿ ಭೂಪಾಲರಿರ

ಎಂಮು ಚತುರಂಗ ಬಲಮಂ ಪೇಳ್ದನಾ ದಕ್ಷ ।
ನೆಂದು ಘುಡುಘುಡಿಸಿ ಬರುತಿರ್ದುದು ಸರೋಜಾಕ್ಷ ॥

ನಾದಿಯಾಗಿರ್ದಮರರೊಂದೆಸೆಯೊಳೊಡ್ಡಿದರ್ ।
ವಾದದಿಂ ದಿಕ್ಪಾಲರೊಂದೆಸೆಯೊಳೊಡ್ಡಿದರ್ ॥

ತೊಡಗಿತ್ತು ಜೂಣಕಾಳಗವಲ್ಲಿ ತನತನಗೆ ।
ನಡೆದು ನೂಂಕಿತ್ತು ಮೂದಲಿಸುತಂ ತನತನಗೆ ॥

ಬೆರಸಿ ಮೀರಿತ್ತು ಶಿವದ್ರೋಹಿ ದಕ್ಷನ ಬಲಂ ।
ಹರಿಯಜದಿಶಾಧಿಪನೋಂಕಿತಾಗಳೆ ನೆಲಂ ॥

ಕಲಿದಿಕ್ಷಿದಂತಾಗೆ (?) ವೀರಭಂದ್ರಂ ಬಂದು ।
ಸಲಿಸುವೆಂ ಇವರಸುವ ಬಾಳಬಾಯ್ಗುಟು ಕೆಂದು ॥

ಬರಸಿಡಿಲಬಳಗದಂತಿರ್ದ ಗಣತತಿ ಸಹಿತ ।
ಎರಗಿದಂ ಭೂಮಿತಳವದಿರೆ ಬಿರಿಯಲ್ಕಹಿತ ॥

ಬಲವರಿಯಲ್ಬೈತಂದು ದಿಕ್ಕರಿಗಳಂ ಸೀಳ್ದು ।
ಬಳಸಿ ದುಮ್ಮಾಳಿಸುವ ತುರಗಕುಲವಂ ಪೋಳ್ದು ॥

ನೆರೆದ ರಥನಿಕರಮಂ ನುಚ್ಚುನೂರಂ ಮಾಡಿ ।
ಪರಿವಾ ಪದಾತಿಗಳ ನರಿದು ಸಣ್ಣಂ ಮಾಡಿ ॥

ಸಂಗರ ಧರೆಯೊಳಮಮ ಹೊಕ್ಕೊಕ್ಕಲಿಕ್ಕುತಿರೆ ।
ಸಂಗಡಿಸಿ ನಾರದಮುನಿಯು ಲೀಲೆ ಪೆರ್ಚುತಿರೆ ॥

ರಣದೊಳಗೆ ಮಾರಿಗೆ ಯರೋಚಕಮದಾಗುತಿರೆ ।
ತಣಿಯುಂಡು ಕಾಲಂಗೆ ಕೊಕ್ಕರಿಕೆ ಪುಟ್ಟುತಿರೆ ॥

ಇಂತಿಂತು ವೀರಭಂದ್ರಂ ತಪಿಸುತಿರಲಂದು ।
ಮುಂತೆ ಹೊಯ್ಯಲ್ಕುಗ್ಗಡುತ್ತಂ ಒಬ್ಬನೈತಂದು ॥

ಎಲೆ ದಕ್ಷ ನೀನೇಕೆ ಜನ್ಮವೇಕೆಲೆ ಪಾಪಿ ।
ನಿಲಲರಿದು ಕೇಳೆಲವೊ ಮುಂಡುಗಾಣದ ಕೋಪಿ ॥

ದೇವಿಯೊಳಿಗವಿಂದುಧರನ ಕಿವಿದಾಗಿತ್ತು ।
ದೇವಸಣುಗಂ ಬಂದನಮರಾಳಿ ತಿರುಗಿತ್ತು ॥

ಇಂದಿರಂ ಸರಿದನಜನುಂ ಮೈಗರೆದನಂತಲ್ಲಿ ।
ನೊಂದು ಹರಿ ಹರಿಣನಾಗಿಯೆ ಬೀಳ್ದನಂತಲ್ಲಿ ॥

ಹಿಡಿವಡೆದವರ್ಕೆಲರ್ ಪುತ್ತೇರಿದರ್ಕೆಲರ್ ।
ಮಡಿವರಥಟರ್ಕೆಲರ್ಬೆತ್ತಲಿದ್ದರ್ಕೆಲರ್ ॥

ಹುಲ್ಲಗಚ್ಚಿದರ್ಕೆಲರ್ಬಾಯ್ವಿರಲವರ್ಕೆಲರ್ ।
ಪಲ್ಗಿರಿವವರ್ಕೆಲರ್ಸೀರೊಕ್ಕವರ್ಕೆಲರ್ ॥

ಬಂದುದಭವನ ದಾಳಿ ಕೊಂದುದೇಳಿಂ ನಿಲ್ಲಿ ।
ಬೆಂದು ಹೋದುದು ನಿನ್ನ ಯಾಗವೆನುತಂತಲ್ಲಿ ॥

ಎನುತಿರಲ್ಪುರದ ಬಾಗಿಲ್ವಾಡಮಂ ಸುಡುತೆ ।
ತನತನಗೆ ಕೇರಿಕೇರಿಯೊಳ್ಪೈದೆ ಕಿಚ್ಚಿಡುತೆ ॥

ನೆರೆ ಬೀದಿವರಿಯಿತ್ತು ಒದೆದೆತ್ತಿ ಕೆಡುಪುತಂ ।
ಮರೆಯೊಗಲ್ಕಾಯ್ವುತಂ ಮಲೆತರಂ ಸೀಳುತಂ ॥

ಕಿತ್ತು ಬರಸೆಳೆಯುತಂ ತಲೆಚಂಡನಾಡುತಂ ।
ನೆತ್ತರಂ ಸೂಸುತಂ ಮಲೆದು ತಲೆಯೊತ್ತುತಂ ॥

ಉರಿದರಿಯುತಂ ಬಂದು ವೀರಭದ್ರಂ ಕಂಡು ।
ಹರುಷಮಂ ಪುಟ್ಟಿಸುತೆ ಬಿರುದಗಣವೈತಂದು ॥

ಮುತ್ತಿದರ್ಪಾತಕಂ ಸವೆದ ಮಖಸಾಲೆಯಂ ।
ಸುತ್ತಿದರದೇನೆಂಬೆನವರೊಂದು ಲೀಲೆಯಂ ॥

ಮುಂಟಪವನೆತ್ತವಾ ದ್ವಿಜಸಭೆಯನೇಳಿಪರ್ ।
ಕಂಟಸದೆ ಪತ್ತುವರ್ಗಜಬಜಂ ಮಾಡುವರ್ ॥

ಕಂಭಮಂ ತರಿಯುತೆ ಕದಂಗಳಂ ಮುರಿವುತಂ ।
ಇಂಬಿನಿಂ ಕುಣಿಯುತಂ ಮಿಗೆ ಪುಟಂ ನೆಗೆವುತಂ ॥

ಕೊಂಡದೊಳಗುಲಿಯುತಂ ನಿಂದುರುಗಿ ನೋಡುತಂ ।
ಕೆಂಡವಂ ಕೆದರುತಂ ಮುಂದೆ ಜರಿದಾಡುತಂ ॥

ತೊನೆದು ಕೈಪರೆಗುಟ್ಟೆ ತೋಳೆತ್ತಿ ಪಾಡುತಂ ।
ಮುನಿಗಳಂ ಹುರಿಗುಟ್ಟಿ ಹೊತ್ತುಗಳ ನಟ್ಟುತಂ ॥

ಎಳ್ಳರಾಸಿಗಳನೆಲ್ಲರ ಮೇಲೆ ಚೆಲ್ಲುತಂ ।
ಮುಳ್ಳಿಲ್ಲವಂ ಸುರರ ಮೋರೆಯೊಳಗೆಳೆವುತಂ ॥

ಇಂತು ಮುಂಗುಡಿಯ ಭೂತಂ ಮಸಗುತಿರಲಂದು ।
ಪಿಂತೈದಿ ಕಲಿ ವೀರಭದ್ರಂ ಮುಳಿದು ಬಂದು ॥

ಉರಿಯ ನಾಲಗೆಗಳಂ ಕಿಳ್ತಿತ್ತಿ ಬಿಸುಡುತಂ ।
ಸಿರಿಗಿ ಪೂಷನ ಹಲ್ಗಳುದುರೆ ಮುಳಿದೊದೆವುತಂ ॥

ವಾಣಿಯಂ ಮೂಗರಿದು ಮಿಗೆ ಮುಂದುಗೆಡಿಸುತಂ ।
ಮಾಣದಲ್ಲಿದಿರಾಂತರಂ ನಿಂದು ತವಿಸುತಂ ॥

ಬರೆ ಕಂಡು ಸುರಸಮಿತಿ ಮರುಗಿ ಮುಮ್ಮಳಿಗೊಂಡು ।
ನೆರೆದು ಗಗನದೊಳೆಲ್ಲರುಂ ವಿಸ್ಮಯಂಗೊಂಡು ॥

ಏಕೆ ತೊಡಗಿದನಿವಂ ಜನ್ನಮಂ ಮರುಳಾಗಿ ।
ಏಕೆ ಬಂದಲ್ಲಿ ರಿಜೆ ದಕ್ಷಂಗೆ ಹಗೆಯಾಗಿ ॥

ಬೆಟ್ಟೇರಿ ಮೃತ್ಯುವಂ ಕರೆದುಕೊಂಡಂ ಪಾಪಿ ।
ಇಟ್ಟಣಿಸಿದುದು ತನಗೆ ಸಾವು ಕೆಟ್ಟಂ ಪಾಪಿ ॥

ಮುನ್ನವೆ ದಧೀಚಿಮುನಿ ಮುನಿದು ಶಾಪಂಗೊಟ್ಟ ।
ಇನ್ನೇನೊ ಅಕಟಕಟ ಪಾಪಿ ದಕ್ಷಂ ಕೆಟ್ಟ ॥

ಎನುತಮರ ರಳುತಲಿರೆ ಘುಡಿಘುಡಿಸುತಂ ಮಸಗಿ ।
ಮುನಿದು ಬಂದುರವಣಿಸಿ ಸಿಡಿಲೆರಗುವಂತೆರಗಿ ॥

ಕೆಡೆಕೆಡೆ ಶಿವದ್ರೋಹಿ ಎನುತೆ ತಲೆಯಂ ಹೊಡೆದು ।
ಉಡುಗುಡುಗು ಗರ್ವವನೆನುತ್ತೆ ತಲೆಯಂ ಕಡಿದು ॥

ಒದೆದು ತಂದಾ ತಲೆಯನುರಿವ ಕೆಂಡದೊಳಿಕ್ಕಿ ।
ಇದ ತಳೆದುಕೊಳ್ಳಾಹುತಿಯನಗ್ನಿ ಎನುತಿಕ್ಕಿ ॥

ಸುಡಿಯುತಂ ಹಿಡಿಹಿಡಿ ಸುರಾವಳಿಯನೆನುತಮಿರೆ ।
ಮೃಡನಿತ್ತ ಬೆಸನಲ್ಲಿ ಮನಕ್ಕೆ ತೋರುತ್ತಮಿರೆ ॥

ನಡುನಡುಗಿ ಕೆಡೆದಿರ್ದ ಕುರಿಯ ತಲೆಯಂ ತಂದು ।
ಒಡಲ ಮೇಲಿಟ್ಟು ಜೀವಂಗೊಟ್ಟು ಕಲಿ ನಿಂದು ॥

ದಕ್ಷನಂ ಹಿಡಿದು ಕೋಡಗಕಟ್ಟ ಕುಟ್ಟುತಂ ।
ತ್ರ್ಯಕ್ಷನಣುಗಂ ಸುರರನವನೊಡನೆ ಕಟ್ಟುತಂ ॥

ತಿರುಗಿ ಬಂದಂ ಭೂತಗಣದಲ್ಲಿ ಕುಣಿದಾಡಿ ।
ಹರಭಕ್ತರೆಲ್ಲರುಂ ಹರುಷದಿಂ ತೂಗಾಡೆ ॥

ಬರುತಿರಲ್ಮುಂದೆ ರಣರಂಗ ರಣರಣಕದೊಳ್ ।
ಮರುಳಪಡೆ ಎದ್ದುದೇನೆಂಬೆ ನೊಂದಣಕದೊಳ್ ॥

ಮೂಳೆಗಳ ತುಪ್ಪವಂ ತಲೆಯೋಡಿನೊಳು ಹೊಯ್ದು ।
ಕಾಳಿಜದ ಖಂಡಮಂ ಮೆಲ್ಲಿತಪ್ಪವನಾಯ್ದು ॥

ಮಿದುಳ ತೆಗೆ ತೆಗೆದು ರಾಶಿಗೊಳಂ ಹೊಯ್ದು |
ಮುದದಿಂದೆ ತಮತಮಗೆ ಮರುಳ್ಗಳೆಲ್ಲಂ ನೆರದು ||

ಬೊಟ್ಟಿಟ್ಟು ನೆತ್ತರಂ ಕರುಳಮಾಲೆಯನಿಕ್ಕಿ |
ಅಟ್ಟಿಗಳನೇರಿಕೊಂಡಲ್ಲಲ್ಲಿ ಮೈಯಿಕ್ಕಿ ||

ಮಾಮಾರಿ ಮಾಂಕಾಳಿಗಳ್ತಿಯಿಂ ಪೊಡಮಟ್ಟು |
ಕಾಮಾಕ್ಷಿ ಚಾಮುಂಡಿಗಳ್ತಿಯಿಂ ಪೊಡಮಟ್ಟು ||

ಮೂಳೆಮುಪ್ಪವನೆತ್ತಿ ತವಕದಿಂ ಕುಡಿಕುಡಿದು |
ಕಾಳಿಜದ ಖಂಡಮಂ ಸವಿಸವಿದು ಚಪ್ಪರಿದು ||

ತೇಗಿ ಬಾಳೆಮ್ಮಯ ವೀರಭದ್ರನೆ ಎನುತೆ |
ಕೂಗಾಡಿ ಪರಮಾಯು ವೀರಭದ್ರಂಗೆನುತೆ ||

ಹೊದ್ದಿ ಕುಳ್ಳಿರ್ದು ಮಿಗೆ ಸವಿಸವಿದು ನಿಗುರುತಂ |
ಬಿದ್ದನಿಕ್ಕಿದನಿಂದು ಎಮಗೆ ಶೂಲಿಯ ಸುತಂ ||

ಎಂದು ಕುಣಿದಾಡುತಂ ಮರುಳ ಪಡೆ ಹರಸುತಿರೆ |
ನಿಂದದಂ ನೋಡಿ ವೀರಭದ್ರಂ ಹರಸುತಿರೆ ||

ದಕ್ಷಮುಖವಿಪಿನಕುಲದಾವಪಾವಕನೆಂಬ |
ದಕ್ಷಮುಖಜೀಮೂತಕುಳ ಮಹಾಬಲನೆಂಬ ||

ಬಿರುದೆತ್ತಿ ಕರೆವ ಕಹಳೆಗಳ ಘನಧ್ವನಿಯೊಳಗೆ |
ನಡೆತಂದನಪ್ರತಿಮ ವೀರಭದ್ರಂ ಮುಂದೆ ||

ಗುಡಿಗಟ್ಟಿತಲ್ಲಿ ಕೈಲಾಸದೋಳ್ನಲವಿಂದೆ |
ಇದಿರ್ವಂದು ಹರನ ಗಣನಾಥರ್ಕಳಿದಿರ್ಗೊಂಡು ||

ಒಡಗೂಡಿ ಕೈಲಾಸದೊಳಗೆ ಬರುತಿರಲಂದು |
ಕಡು ನೀರೆಯರ್ನೆರೆದು ಕರುಮಾಡದೋಳ್ನಿಂದು ||

ನೋಡಿ ನಲವಿಂ ವೀರಭದ್ರಂಗೆ ಕೈಮುಗಿದು ।
ಕೂಡೆ ಗಣಸಂತತಿಗೆ ಎರಗಿ ಹರುಷದೊಳಂದು ॥

ಹಿಂದೆ ಬರ್ಪವನಾವವಂ ದಕ್ಷನೆಂಬವನ ।
ಇಂದುಧರನಂ ದೇವಿಯಂ ನಿಂದೆಗೈದಪನ ॥

ತಲೆಯೊಂದುಪರಿ ದೇಹವೊಂದುಪರಿ ಯವನವ್ವ ।
ಛಲವೇಕೆ ತಾನೇಕೆ ಲಜ್ಜೆಯಿಲ್ಲದನವ್ವ ॥

ಬೇಕು ಬೇಕೀ ಮುಖಕೆ ದೇವನಂ ನಿಂದಿಪುದು ।
ಬೇಕು ಬೇಕೀ ಮುಖಕೆ ಯಾಗವಂ ಮಾಡಿಪುದು ॥

ನಡೆತಪ್ಪ ರಮರರೇತಕೆ ಖಳನೊಳೊಡನಾಟ ।
ಒಡನಾಡಿಯರನಿಂತು ಮಾಡಿತ್ತವನ ಕೂಟ ॥

ವೆಂದು ಪುರನಾರಿಯರ್ಕೈಹೊಯ್ದು ನಗುತಮಿರೆ ।
ನಿಂದು ನೆಲೆನೆಲೆಗಳೊಳ್ನೋಟಮಂ ಬೀರುತಿರೆ ॥

ನಡೆತಂದು ಗಿರಿಜೇಶನರಮನೆಯ ನೊಳವೊಕ್ಕು ।
ಬಿಡದೆ ವ್ಯೆವೆಚ್ಚುತಲಿ ನಲವಿಂ ಮನಂಮಿಕ್ಕು ॥

ವೀರಭದ್ರಂ ಬಂದು ದೂರದಿಂ ಪಶುಪತಿಗೆ ।
ಮಾರಮದ ಮಥನಂಗೆ ಕಾರುಣ್ಯವಾರಿಧಿಗೆ ॥

ನೆನೆವರ ನಿಧಾನಕ್ಕೆ ಭಕ್ತಜನ ಸುರತರುಗೆ ।
ಮುನಿಜನಧ್ಯಾನಗಮ್ಯಂಗೆ ಜಗದ್ಗುರುವಿಂಗೆ ॥

ಶರಣಜನಜನಕಂಗೆ ಶರಣಾಬ್ಧಿ ಚಂದ್ರಂಗೆ ।
ಪರಮಾತ್ಮರೂಪಂಗೆ ಪಂಚೇಷುನಾಶಂಗೆ ॥

ದುಷ್ಟಜನ ಶಿಕ್ಷಂಗೆ ಶಿಷ್ಟಜನ ರಕ್ಷಂಗೆ ।
ಸೃಷ್ಟಿಸ್ಥಿತಿಪ್ರಳಯ ಹೃಷ್ಟಂಗನಷ್ಟಂಗೆ ॥

ವೇದಾರ್ಥರೂಪಂಗೆ ವಾದಕ್ಕತರ್ಕ್ಯಂಗೆ ।
ವೇದಾಂಗ ವೇದ್ಯಂಗೆ ನಾದಪ್ರಮೋದಂಗೆ ॥

ವೈಯಿಕ್ಕಿ ನಿಂದಂ ವಿರೂಪಾಕ್ಷಲಿಂಗಂಗೆ ।
ಕೈಯೆತ್ತಿ ಪೊಡಮಟ್ಟ ನೆಮ್ಮ ಶಿವಲಿಂಗಂಗೆ ॥

ಇದೆ ದೇವ ಬಿನ್ನಪಂ ಖಳದಕ್ಷ ಸಂತಾನ ।
ವಿದೆ ದೇವ ಬಿನ್ನಪಂ ದೋಷಿ ಸುರಸಂತಾನ ॥

ವಿದೆ ಚಕ್ರವಿದೆ ಕುಲಿಶವಿದೆ ಕಾಲದಂಡವಿದೆ ।
ಇದೆ ಬೊಮ್ಮನಸ್ತ್ರವಿದೆ ಸಕಲ ಋಷಿವೃಂದವಿದೆ ॥

ಇಂತೆಂದು ವೀರಭದ್ರಂ ಬಿನ್ನವಿಸಲಂದು ।
ಮುಂತೆ ವೈಯಿಕ್ಕಿ ಕೈಮುಗಿದು ದಕ್ಷಂ ನಿಂದು ॥ ೫೫೦

ದೇವ ಸರ್ವಾಪರಾಧಿಯನೆನ್ನ ನೀಕ್ಷಿಪುದು ।
ದೇವ ಮುಂದರಿಯದಜ್ಞಂಗೆನಗೆ ಕರುಣಿಪುದು ॥

ಶಿಶು ತಪ್ಪ ಮಾಡಿದರೆ ಕೊಂದರೊಳರೇ ದೇವ ।
ಪಶು ತಪ್ಪ ಮಾಡಿದರೆ ಕೊಂದರೊಳರೇ ದೇವ ॥

ಶಿಶುವಾನೆ ಪಶುವಾನೆ ತಂದೆ ಪಶುಪತಿ ನೀನೆ ।
ಶಶಿಧರನೆ ವಿಷಧರನೆ ದಯದಿ ಮಾಕ್ಷಿಸು ನೀನೆ ॥

ಕರುಣಿಪುದನಾಥಂಗೆ ಕರುಣಿಪುದು ಭೀತಂಗೆ ।
ಕರುಣಿಸುವುದೆಲೆ ದೇವ ಗರ್ವದಿಂ ಬೆಂದಂಗೆ ॥

ಎಂದು ದಕ್ಷಂ ಕೃಪಾಭಾವದಿಂ ದೊರಲುತಿರೆ ।
ಇಂದುಧರನಭಯವಿತ್ತಂ ಸುರರ್ಪೊಗಳುತಿರೆ ॥ ೫೬೦

ಶತಯಜ್ಞದೊಂದು ಫಲಮಂ ವೀರಭದ್ರನಿಂ ।
ಹತನಾದ ದಕ್ಷಂಗೆ ಕೊಡಿಸಿದಂ ರುದ್ರನಿಂ ॥

ಏನೆಂಬೆನುಬ್ಬಟೆಯ ಕರುಣಿ ಸುರರಂ ನೋಡಿ ।
ತಾನೆಂದನಂತವರ್ಗಭಯಕರವಂ ನೀಡಿ ॥

ಎನ್ನ ವರ್ಗಳಿಲ್ಲದಲ್ಲಿಗೆ ಪೋಗದಿರಿ ಎಂದು ।
ಎನ್ನ ವರನರಿದಡ್ಡಮೊಗವಾಗದಿರಿ ಎಂದು ॥

ಮರೆದು ಡಂಭಕರೆಂಬರಂ ಬೆರಸದಿರಿಮೆಂದು ।
ಮರಹಿಲ್ಲದೆನ್ನ ನಾಗಳ್ನೆ ನೆಯುತಿರಿ ಎಂದು ॥

ಅಂದಮರ ಸಂತತಿಗೆ ಕಾರುಣ್ಯವಂ ಮಾಡಿ ।
ಮುಂದಿರ್ದ ವೀರಭದ್ರನನಳ್ಕರಿಂ ನೋಡಿ ॥

ತೆಗೆದು ತಳ್ಕೈಸುತಂ ಬಾಯತಂಬುಲವಿತ್ತು ।
ಸೊಗಯಿಪ ಕುಮಾರಂಗೆ ಬೀಳುಡೆಯ ನೊಲಿದಿತ್ತು ॥

ಕೊಂಡಾಡಿ ವೀರಭದ್ರನನೆಲ್ಲರುಂ ನೋಡೆ ।
ಮುಂಡಾಡಿದಂ ಭಕ್ತತತಿ ಹರುಷದೋಳ್ಕೂಡೆ ॥

ದಕ್ಷಾದಿಸುರರನಂತವರವರ ಲೋಕಕ್ಕೆ ।
ಆ ಕ್ಷಣಂ ತಾನೆ ಕಳುಹಿದನವರ ಲೋಕಕ್ಕೆ ॥

ಮಂದಿರದೊಳೆಸೆವ ಗಣನಾಯಕರೊಳೊಪ್ಪಿದಂ ।
ಇಂದುಧರನತುಳಬಳ ನಪ್ರತಿಮನೊಪ್ಪಿದಂ ॥

ಅತನುಹರನನುಮಿತ್ತ್ರ ಬಂಧುವಿಂತೊಪ್ಪಿದಂ ।
ಅತಿದಾನಿಯತಿಕರುಣಿ ಯತಿಶಯದೊಳೊಪ್ಪಿದಂ ॥

ಹಂಪೆಯ ವಿರೂಪಾಕ್ಷನನವರತಲೊಪ್ಪಿಹಂ ।
ಸೊಂಪಿನಿಂದನವರತ ಶಿವಶಂಭು ವೊಪ್ಪಿದಂ ॥

ಕಂದ||

ನಂದೀಶಾದಿ ಗಣೇಶರೊ ||
ಳಂದಧಟಂ ಮೆರೆದ ವೀಲಭದ್ರನ ಶಿಶುವಾ ||
ನೆಂದು ಕೃಪೆಯಿೊವುತಿರ್ಕೆನ |
ಗೆಂದುಂ ಶಶಿಮೌಲಿ ಹಂಪೆಯ ವಿರೂಪಾಕ್ಷಂ ||

ಶ್ರೀ ವೀರಭದ್ರ ದೇವರ ರಗಳೆ

ಸಮಾಪ್ತಂ.

——:o:——



ಬೇಲೂರಿನಲ್ಲಿರುವ ಕವಿ ರಾಘವಾಂಕನ ಸಮಾಧಿಯ
ದೂರದ ನೋಟ.

'ವೀರೇಶ ಚರಿತೆ'



ಬೇಲೂರಿನಲ್ಲಿರುವ ಕವಿ ರಾಘವಾಂಕನ ಸಮಾಧಿಯ ಹತ್ತಿರದ ನೋಟ.

# ವೀರೇಶ ಚರಿತೆ ಕಥಾಸಾರ

——:o:——

## ಪೀಠಿಕೆ

ವಿಷ್ಣು, ಬ್ರಹ್ಮ, ಇಂದ್ರ, ಸೂರ್ಯ, ಚಂದ್ರ ಮೊದಲಾದ ದೇವಪ್ರಮುಖರಿಂದ ನಮಸ್ಕರಿಸಿಕೊಳ್ಳಲ್ಪಡುವ ಸಂಪದ್ಯುಕ್ತವಾದ ಪಾದಗಳುಳ್ಳವನೂ, ಅಕ್ಷಯ, ಅದ್ವಯ, ಅನುಪಮ ಮೊದಲಾದ ಮಹಿಮೆಗಳಿಂದ ಅತಿಶಯರೂಪನೂ ಆದ ಶಿವನು, ಸತೀವಿಯೋಗ ನಿಮಿತ್ತವಾಗಿ ತನಗುಂಟಾದ ಕೋಪಾಟೋಪದಿಂದ ದಕ್ಷಯಾಗವನ್ನು ನಾಶಮಾಡುವ ಸಲುವಾಗಿ ವೀರೇಶ್ವರನನ್ನು ಸೃಷ್ಟಿಸಿದನು. ಅಂತಹ ಮಹಿಮಾಶಾಲಿಯಾದ ಪಂಪಾಕ್ಷೇತ್ರಾಧಿಪತಿ ಶ್ರೀ ಗುರು ವಿರೂಪಾಕ್ಷನು ನಮಗೆ ಪ್ರಿಯತಮವಾದ ಶಿವಭಕ್ತಿ ಭಾಗ್ಯವನ್ನು ಅನುಗ್ರಹಿಸಲಿ. ೧

ತಲೆಯ ನೀಳವಾದ ಜಡೆಗಳ ಪೊದರಿನಲ್ಲಿ ಸಿಕ್ಕಿದ ಚಂದ್ರನ ಶರೀರದಿಂದ ಧಾರಾಪ್ರವಾಹವಾಗಿ ಸುರಿಯುತ್ತಿದ್ದ ಅಮೃತವನ್ನು ಹೀರಿ, ತೃಪ್ತಿಪಟ್ಟು ಘುಡಿಘುಡಿಸುವ ಕೋಪದ ಪ್ರತಾಪವನ್ನು ಕಡಿಮೆಮಾಡಿಕೊಂಡು ಯಾವುದು ಶಾಂತಿಯ ಮಡುವೆನಿಸಿ, ಕೃಪಾಮಯವಾದ ದೃಷ್ಟಿಯ ಪ್ರಕಾಶದಿಂದ ಶೋಭಿಸುತ್ತಿರುವುದೋ, ಅಂತಹ ಹಣೆಗಣ್ಣಿನಿಂದ ಪರಿಶೋಭಿಸುವ ಹಣೆನೊಗದೊಡೆಯನಾದ ಶ್ರೀ ಗುರುಹಂಪೆಯ ವಿರೂಪಾಕ್ಷನು ಸದಾ ನಮ್ಮನ್ನು ರಕ್ಷಿಸಲಿ. ೨

ಅಕ್ಷಯ, ಅಕ್ಷರ, ಉಕ್ಷಧ್ವಜ ಎಂಬ ಮೊದಲಾದ ಹೆಸರುಗಳಿಂದ ನಾಶರಹಿತನಾದವನು ಎಂಬ ಮಹಿಮೆಯಿಂದ ಕೂಡಿದ, ತ್ರಿನೇತ್ರನೂ, ವೃಷಭಧ್ವಜನೂ, ಶರಣರನ್ನು ಕಾಪಾಡ ತಕ್ಕವನೂ, ಕಾಲಕೂಟ ವಿಷವನ್ನು ಪಾನಮಾಡಿದವನೂ, ಪಾಪಿಗಳಿಗೆ ಭಯಂಕರನೂ, ಮರೆಹೊಕ್ಕವರನ್ನು ಕಾಪಾಡತಕ್ಕವನೂ, ಭಕ್ತರಿಗೆ ಮೋಕ್ಷವನ್ನೀಯತಕ್ಕವನೂ, ದಕ್ಷಯಾಗವನ್ನು

ನಾಶಮಾಡಿದವನೂ, ತನ್ನ ಹೊಟ್ಟೆಯಲ್ಲಿ ಸಮಸ್ತ ಲೋಕಗಳನ್ನು ಅಡಗಿಸಿ ಕೊಂಡಿರುವವನೂ, ಅಪಾರವಾದ ಪರಾಕ್ರಮಕ್ಕೆ ಆಶ್ರಯಸ್ಥಾನವಾದವನೂ ಆದ ಶ್ರೀ ವಿರೂಪಾಕ್ಷನು ನಮ್ಮನ್ನು ಸದಾ ರಕ್ಷಿಸಲಿ. ೩

ಪರಿಣಾಮದ ಕಣಿ, ಶಾಂತಿಯ ನಿಧಿ, ಭಕ್ತಿಯಸಾಗರ, ಏಕೋನಿಷ್ಠೆಯ ಹರ, ಅತಿಸಾಮರ್ಥ್ಯದ ತರು, ನೀತಿಯ ಕಡಲು, ದಯಾಗಾರ, ಪುಣ್ಯದ ಪುಂಜ, ಸತ್ಯದ ಸದನ, ಹರುಷದ ಮಡು, ಸರ್ವಜ್ಞತ್ವದ ಶಾಸನ, ಸುಸ್ಥಿರದಾಸ್ಥಲ ಯುಕ್ತ ಎಂಬ ಘನತಮವಾದ ಕೀರ್ತಿಯಿಂದ ಲೋಕವಿಖ್ಯಾತನಾಗಿರುವ ಹಂಪೆಯ ಹರಿಹರದೇವನ ಕಾರುಣ್ಯದ ಸುಪ್ರಭೆಯು ನಮ್ಮ ಮನೋಮಂದಿರದಲ್ಲಿ ಸದಾ ಬೆಳಗುತ್ತಿರಲಿ. ೪

ವಿಚಾರ ಮಾಡಲು ಎಲ್ಲಕ್ಕೂ ಬಲವಾದುದು ಶಿವನ ಅಷ್ಟಾಂಗ; ಅದಕ್ಕೂ ಬಲ ರುದ್ರ ; ರುದ್ರನಿಗೂ ಬಲವಾದುದು ಅವನ ಹಣೆಗಣ್ಣು; ಆ ಹಣೆಗಣ್ಣಿಗಿಂತಲೂ ಬಲವಾದವನು ವೀರೇಶ್ವರನು. ಅಂತಹ ಮಹಾನುಭಾವನಾದ ವೀರಭದ್ರನ ಪರಾಕ್ರಮವನ್ನು ಬಣ್ಣಿಸಲು ಆದಿಶೇಷನಿಗೆ ಸಾಧ್ಯವೇ ? ಅವನ ಪರಾಕ್ರಮವನ್ನು ಲೆಕ್ಕಿಸಲು ಸೂರ್ಯನಿಗೆ ಸಾಧ್ಯವೇ? ಅವನ ಮಹಾತ್ಮ್ಯವನ್ನು ವಿಮರ್ಶಿಸಲು ದೇವೇಂದ್ರನಿಗೆ ಸಾಧ್ಯವೇ ? ಅಂದ ಮೇಲೆ ನಮ್ಮಂತಹ ಸಾಮಾನ್ಯರಿಂದ ಶ್ರೀ ವೀರಭದ್ರನ ಮಹಿಮಾಯುಕ್ತವಾದ ಚರಿತ್ರೆಯನ್ನು ಬರೆಯಲು ಸಾಧ್ಯವೇ ? ಆದರೂ, ಪುಣ್ಯಾತ್ಮರಾದ ಶಿವಭಕ್ತರ ಕೃಪಾ ಪ್ರಭಾವದಿಂದ ನಾನು ಆ ವೀರಭದ್ರನನ್ನು ಹೊಗಳಲು ಪ್ರಯತ್ನಿಸಿರುವೆನು. ೫

ಈ ಕಾವ್ಯದಲ್ಲಿರುವ ಬಗೆಬಗೆಯ ರಸ ಮತ್ತು ಭಾವಾರ್ಥಗಳು, ಉತ್ತಮವಾದ ಶೈಲಿ, ಸಂಧಿ, ಸಮಾಸ, ವಿಭಕ್ತಿ, ಅಲಂಕಾರ, ಯತಿ, ಧಾತು, ಕ್ರಿಯೆ, ಕಾರಕ, ಪ್ರಕೃತಿ, ಪ್ರತ್ಯಯ ಮೊದಲಾದ ವಾಕ್ಯರಣ ಮತ್ತು ಅಲಂಕಾರ ಶಾಸ್ತ್ರ ವಿಚಾರಗಳು ಮೊದಲಾದುವುಗಳಲ್ಲಿ ಏನಾದರೂ ಮನುಷ್ಯ ಸ್ವಭಾವದಿಂದ ತಪ್ಪುಮಾಡಿದ್ದರೆ, ನಿಮ್ಮವನೆಂಬ ಕಾರಣದಿಂದ ಅಂತಹ ತಪ್ಪುಗಳನ್ನು ಮನ್ನಿಸಿ, ಆನಂದ ಚಿತ್ತರಾದ ಲೋಕದ ಶಿವಭಕ್ತರು ನನ್ನ ಮೇಲೆ ಕರುಣಿಸಿ ಈ ಕಾವ್ಯವನ್ನು ತಿದ್ದಿ ಸರಿಪಡಿಸಲಿ.

ಬಹಳವಾಗಿ ಅಹಂಕರಿಸಿ ಲೋಕಬಾಧಕನೆನಿಸಿದ ಹಿರಣ್ಯಕಶ್ಯಪುವಿನ ಬೆನ್ನನ್ನು ಬಗೆದು ಅದರಿಂದ ಸೋರುವ ಬಿಸಿರಕ್ತವನ್ನು ಕುಡಿದು, ಅದರಿಂದುಂಟಾದ ಪ್ರಮತ್ತತೆ 'ಮತ್ತು ಮರುಳಾಟಗಳ ದೆಸೆಯಿಂದ ಲೋಕಗಳನ್ನು ಪುಡಿಪುಡಿಮಾಡುತ್ತಿದ್ದ, ನರಸಿಂಹನ ಹಣೆಯಲಿಪಿಯನ್ನು, ದೇವತೆಗಳ ಪ್ರಾರ್ಥನಾನುಸಾರ ಶರಭಾವತಾರವನ್ನು ಧರಿಸಿ ತೊಡೆದು ಹಾಕಿದ ವೀರೇಶನ ಮಹಿಮಾಯುಕ್ತವಾದ ಚರಿತ್ರೆಯನ್ನು ಹೇಳುತ್ತೇನೆ. ನಿರ್ಮಲ ಚಿತ್ತರೂ ಅಪ್ರತಿಮ ಶಿವಭಕ್ತರೂ ಆದ ಸಜ್ಜನರು ಈ ಕಥೆಯನ್ನು ಕೇಳಲಿ. ೭

ಈ ಕಾವ್ಯದ ಹೆಸರು ವೀರೇಶ್ವರ ಚರಿತೆ. ಈಕಾವ್ಯದ ಅಧಿಪತಿ ಓರುಂಗಲ್ಲಿನ ವೀರಭದ್ರಸ್ವಾಮಿ. ಈ ಗ್ರಂಥಕ್ಕೆ ಸಹಾಯಕರಾದವರು, ಲೋಕದ ಸದ್ಭಕ್ತರು. ಈ ಕಾವ್ಯವನ್ನು ಸಂತೋಷದಿಂದ ಹೇಳಿದವನು ಯತಿಪತಿಯಾದ ಹಂಪೆಯ ಹರಿಹರದೇವರ ಕಾರುಣ್ಯದ ಸುತನೂ, ಶಿವಕವಿಗಳ ಭೃತ್ಯನೂ ಆದ ಹಂಪೆಯ ರಾಘವಾಂಕ ಪಂಡಿತ. ಅಂದಮೇಲೆ ಈ ಪ್ರಪಂಚದಲ್ಲಿ ಈ ಕಾವ್ಯವನ್ನು ಮೆಚ್ಚದ, ಅಪ್ಪಿಕೊಳ್ಳದ ಸತ್ಪುರುಷರಾರು? ೮

ಪ್ರಪಂಚದಲ್ಲಿ ಪೂಜ್ಯರಾದ ಶಿವಭಕ್ತರಿಗೂ, ಭಗವಂತನಾದ ಶಿವನಿಗೂ ಸಮರ್ಪಿಸಿದ ಬುದ್ಧಿಯಲ್ಲಿ ಮರೆತಾದರೂ ಅಜ, ಹರಿ, ಸುರಪತಿ, ಗಿರಪತಿ ಮೊದಲಾದ ಸಾಮಾನ್ಯ ದೇವತೆಗಳನ್ನೂ, ರಾಜರೇ ಮೊದಲಾದ ಭವಿಗಳನ್ನೂ, ಸ್ತೋತ್ರಮಾಡಿದೆನಾದರೆ ನಾನು ಶಿವದ್ರೋಹಿಯಾಗುವೆನು; ಎಂಬ ವಿಖ್ಯಾತವಾದ ಬಿರುದಿನಿಂದ ಪ್ರಸಿದ್ಧನಾದ ಶಿವಕವಿ ಹಂಪೆಯ ರಾಘವಾಂಕ ಪಂಡಿತನು ಈ ಮೊಸಲುಗವಿತೆಯನ್ನು (ವೀರೇಶಚರಿತೆಯನ್ನು) ಬರೆದಿದ್ದಾನೆ. ಆದ್ದರಿಂದ ನಿರ್ಮಲ ಚಿತ್ತರಾದ ಸತ್ಪುರುಷರು ಈ ಪವಿತ್ರವಾದ ಕಾವ್ಯವನ್ನು ಮನವಿಟ್ಟು ಕೇಳಿರಿ. ೯

——:o:——

# ಕಥಾ ಪ್ರಾರಂಭ

——:o:——

ಈ ಕಾವ್ಯಕ್ಕೆ ಮೊದಲಾವುದೆಂದರೆ:—ಪ್ರಚಂಡವಾದ ತೆರೆಗಳಿಂದಲೂ, ಓಡಾಡುವ ನೀರಾನೆ ಮತ್ತು ನೊಸಳೆ, ಮೀನು ಮೊದಲಾದ ಜಲಜಂತುಗಳಿಂದಲೂ, ಜಲಚರಪ್ರಾಣಿಗಳ ಬಾಲಗಳ ಬಡಿಯೋಣದರಿಂದುಂಟಾಗುವ ನೀರಿನ ಹನಿಗಳು ರತ್ನಗಳಂತೆ ಕಂಗೊಳಿಸುತ್ತ ಶ್ವೇತದ್ವೀಪವನ್ನು ಅಣಕಿಸುವುವೋ ಎಂಬಂತಿರುವ ವಿಸ್ತಾರವಾದ ಸಾಗರವು ಒಪ್ಪುತ್ತಿದೆ. ಅಂತಹ ಸಮುದ್ರದಿಂದ ಸುತ್ತುವರಿದಿರುವ ಭೂಭಾಗವು ಶೋಭಿಸುತ್ತಿದೆ. ಆ ಭೂಮಿಯ ಶಿರೋಮಣಿಯಂತೆ ಮೇರುಪರ್ವತವು ಶೋಭಿಸುತ್ತಿದೆ. ವಿಖ್ಯಾತವಾದ ಆ ಮೇರುವಿನ ಉತ್ತರ ಭಾಗವನ್ನು ನಾನು ಏನೆಂದು ಬಣ್ಣಿಸಲಿ ? ೧೦

ಆ ಮೇರುವಿನ ಉತ್ತರಭಾಗದಲ್ಲಿ ಪ್ರಸಿದ್ಧವಾಗಿರುವ, ಶಿವನ ವಾಸಸ್ಥಾನವೆನಿಸಿದ, ದೇವತೆಗಳಿಗೆ ಸಂತೋಷವನ್ನುಂಟುಮಾಡುವ, ಮಾಯಾಸಂಬಂಧವಾದ ಗುಣಗಳನ್ನು ಪರಿಹರಿಸುವ, ಲೋಕದ ಸಮಸ್ತ ಪರ್ವತಗಳನ್ನೂ ಧಿಃಕರಿಸುತ್ತಿರುವ ಕೈಲಾಸವು, ಚಂದ್ರಬಿಂಬಗಳ ರಾಶಿಯೋ ? ಘಟ್ಟಿಗೊಂಡ ಬೆಳುದಿಂಗಳೋ ? ಪರಮೇಶ್ವರನ ಕೀರ್ತಿಲತೆಯ ಫಲವೋ ? ಲೋಕಾವಳಿಯ ಕಂಗಳಿಗೆ ಮಂಗಳದ ಒಬ್ಬುಳಿಯೋ ? ಭಕ್ತರ ಭಾಗ್ಯದ ಹೆಬ್ಬೆಳೆಯ ಹೊಸ ರಾಸಿಯೋ ? ಲೋಕದ ಪುಣ್ಯದ ಸಂತೆಯೋ ? ಎಂಬಂತೆ ವೈಭವದಿಂದ ಮೆರೆಯುತ್ತಿದೆ. ೧೧

ಆ ಕೈಲಾಸದಲ್ಲಿ ಜನನ ಮರಣಾತೀತವಾದ ಶಂಕರನ ಅರಮನೆಯು ಆಕಾಶವನ್ನು ಬಗೆದು, ಎಲ್ಲ ಲೋಕಂಗಳ ನೆತ್ತಿಯಮೇಲೆ ಮೆಟ್ಟಿ ನಿಂತ ಗಿರಿರಾಜನ ಕಿರೀಟವೋ ಎಂಬಂತೆ, ಅಸಂಖ್ಯಾತವಾದ ಸೂರ್ಯ ಬಿಂಬಗಳ ಬೆಳಗಿನಿಂದ ಅದ್ಭುತವಾಗಿ ಶೋಭಿಸುತ್ತಿದೆ. ಆ ಶಿವನ ಅರಮನೆಯ ಓಲಗ

ಶಾಲೆಯು ಸುವರ್ಣ, ನವಮಣಿ, ಸ್ಪರ್ಶಮಣಿ, ಚಂದ್ರಕಾಂತಶಿಲೆ, ಚಿಂತಾರತ್ನ ಇವುಗಳಿಂದೊಡಗೂಡಿದ ಗೋಡೆ ಮತ್ತು ನೆಲಗಟ್ಟುಗಳಿಂದ ಶೋಭಿಸುತ್ತಿದೆ. ಅದನ್ನು ನಾನು ಎಷ್ಟೆಂದು ಬಣ್ಣಿಸಲಿ? ೧೨

ಸಕಲ ಚರಾಚರ ಜನ್ಮಸ್ಥಳನೂ, ಮಂಗಳದರ್ಪಣದಂತೆ ಶೋಭಿಸ ತಕ್ಕವನೂ ಆದ ಶಿವನು ಆತನ ಓಲಗಶಾಲೆಯಲ್ಲಿ ವಿರಾಜಮಾನವಾದ ನವಮಣಿಗಣಮಯವಾದ ಸಿಂಹಾಸನದಲ್ಲಿ ಸಮಸ್ತ ದೇವತೆಗಳ ಸ್ತೋತ್ರ ಗಳನ್ನು ಸ್ವೀಕರಿಸುತ್ತ, ಭಕ್ತರ ಅಭೀಷ್ಟಗಳನ್ನು ನೀಡುತ್ತ, ಜಂಗಮಕಲ್ಪ ದ್ರುಮವೆಂಬಂತೆ ಶೋಭಿಸುತ್ತಿದ್ದನು. ೧೩

ಆ ಪ್ರಸಂಗದಲ್ಲಿ ಶಿವನ ಹಣೆಗಣ್ಣಿನ ಉರಿಬಿಸಿಲಿನಿಂದ ಬಳಲುತ್ತಿರುವ, ತಲೆಯಲ್ಲಿರುವ ಚಂದ್ರನಿಗೆ ಅಮೃತವನ್ನು ಉಣಬಡಿಸುವಂತೆ ಚಾಮರಗಳು ವಿಜೃಂಭಿಸುತ್ತಿರಲು, ತಲೆಯನ್ನು ಅಲಂಕರಿಸಿರುವ ಹಾವುಗಳಿಗೆ ಆಹಾರ ಗಳನ್ನು ಕೊಡುತ್ತಿರುವರೋ ಎಂಬಂತೆ ಸ್ತ್ರೀಯರು ಬೀಸಣಿಕೆಗಳಿಂದ ಗಾಳಿ ಯನ್ನು ಬೀಸುತ್ತಿರಲು, ನಾನಾ ದೇವಪ್ರಮುಖರ ಅಲಂಕೃತವಾದ ತಲೆಗಳು ನಾಚುವುದಕ್ಕಾಗಿಯೋ ಎಂಬಂತೆ ಸುಂದರಿಯರಿಂದ ಹಿಡಿದೆತ್ತಿದ ಕನ್ನಡಿಗಳು ಶೋಭಿಸುತ್ತಿರಲು, ವನದೇವತೆಯರಿಂದ ಉಪಚರಿಸಲ್ಪಡುತ್ತಿರುವ ವಸಂ ತನೋ ಎಂಬಂತೆ ಪರಶಿವನು ಆ ತನ್ನ ಸಿಂಹಾಸನದಲ್ಲಿ ಶೋಭಿಸು ತ್ತಿರುವನು. ೧೪

ಆ ಶಿವನ ಸಭೆಯ ಎಡಬಲ ಭಾಗಗಳಲ್ಲಿ ಕೈಮುಗಿದು ನಿಂತಿರುವ ವಿಷ್ಣು ಬ್ರಹ್ಮರಿಂದಲೂ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪದವಿಗಳನ್ನು ಅನುಭವಿಸುತ್ತಿರುವ ಗಣಂಗಳಿಂದಲೂ, ಶಿವನ ಕಡೆಗಣ್ಣಿನ ಬಂಟರೆನಿಸಿರುವ ಲಕ್ಷ್ಮೀ, ಸರಸ್ವತಿಯರಿಂದಲೂ, ಸಾಲುಸಾಲಾಗಿ ನಿಂತಿ ರುವ ದಿಕ್ಪತಿಗಳೇ ಮೊದಲಾದ ದೇವತೆಗಳಿಂದಲೂ, ಮನುಮುನಿಗಳ ವೃಂದ ದಿಂದಲೂ ಶಿವಸಭೆಯು ಪರಿಶೋಭಿಸುತ್ತಿದ್ದಿತು. ೧೫

ಅಂತಹ ದಿವ್ಯಸಭೆಯಲ್ಲಿ ಮಂಗಳಮಯನೂ, ಜಿತದೂಷಣ, ಅತಿಭೀಷಣ, ಅಘಶೋಷಣ, ಅಹಿಭೂಷಣ ಎಂದು ಕೀರ್ತಿವೆತ್ತವನೂ ಆದ ಶಿವನ ಸಮ್ಮುಖದಲ್ಲಿ ಸಭೆಯಲ್ಲಿ ಓಡಾಡುತ್ತಿದ್ದ ಶಿವಗಣಂಗಳ ಕಿರೀಟಗಳ

ಕಾಂತಿಯಿಂದಲೂ, ಅವರು ಝಳಪಿಸುವ ಖಡ್ಗಗಳಿಂದುಂಟಾಗುವ ಪ್ರಕಾಶ ದಿಂದಲೂ, ಚಂದ್ರಕಾಂತ ಶಿಲೆಯ ಒಡವೆಗಳಿಂದ ಅಲಂಕೃತರಾದ ದೇವ ಸ್ತ್ರೀಯರ ದೇಹಸಂಪತ್ತಿನ ಪ್ರಕಾಶದಿಂದಲೂ ಶೋಭಾಯಮಾನನೆನಿಸಿದ್ದನು. ೧೬

ಅತ್ತ ಸಪ್ತಸಮುದ್ರಗಳಿಂದ ಆವರಿಸಲ್ಪಟ್ಟಿರುವ ಭೂಭಾಗದಲ್ಲಿ ಪ್ರಸಿದ್ಧನಾಗಿರುವ, ಎಲ್ಲ ರಾಜಾಧಿರಾಜರುಗಳನ್ನು ಜಯಿಸುವ ಪರಾಕ್ರಮ ದಿಂದ ಕೂಡಿರುವ, ನಾನಾ ದೇವತೆಗಳಿಂದ ಕೂಡ ಜಯಸೇಸೆಯನ್ನು ಪಡೆದಿ ರುವ, ಪರಾಕ್ರಮಶಾಲಿಯಾದ ದಕ್ಷಪಿತಾಮಹನು ಮೂರಲೋಕದಲ್ಲಿ ಪ್ರಸಿದ್ಧ ನಾಗಿರುವನು. ೧೭

ಇತ್ತ ಅಖಿಲಕ್ಕೆ ಆಧಾರನೂ, ಭವಕ್ಕೆ ದೂರನೂ, ಮಹಿಮೆಗೆ ಆಗ ರನೂ, ನಿಜಸುಖದ ಸಾರನೂ ಆದ! ಪರಶಿವನು, ಆ ತನ್ನ ದಿವ್ಯ ಸಭೆಯಲ್ಲಿ ಸರಸ್ವತಿಯ ವೀಣೆಯನ್ನೂ, ತುಂಬುರನಾರದರ ಬಿನ್ನಹವನ್ನೂ, ನಂದಿ ಮಹಾಕಾಳರ ತಾಳಗತಿಯನ್ನೂ, ಭೃಂಗೀಶನ ನರ್ತನವನ್ನೂ, ಬ್ರಹ್ಮನ ವೇದಘೋಷವನ್ನೂ, ಚಂಡೇಶನ ಹೊಗಳಿಕೆಯನ್ನೂ ಲಾಲಿಸುತ್ತ ಮೆರೆದಿ ರುತ್ತಿರುವನು. ೧೮

ಆ ಸಮಯದಲ್ಲಿ ಬ್ರಹ್ಮ, ವಿಷ್ಣು, ಚಂದ್ರ, ಸೂರ್ಯ ಮೊದಲಾದ ಎಲ್ಲ ದೇವತೆಗಳ ಲೋಕಗಳನ್ನು ಹೊಕ್ಕು, ಅವರುಗಳಿಂದ ಅಪಾರವಾದ ಸನ್ಮಾನವನ್ನೂ, ವಂದನೆಯನ್ನೂ, ಉಪಚಾರವನ್ನೂ, ಉಡುಗೊರೆ ಯನ್ನೂ, ಗೌರವವನ್ನೂ ಕೈಗೊಂಡು, ಇನ್ನು ಮುಂದೆ ಕೈಲಾಸಪತಿಯಾದ ಪರಮೇಶ್ವರನಿಂದ ಅತಿಶಯವಾದ ಸೇವೆಯನ್ನು ಕೈಗೊಳ್ಳಲು ಬಯಸಿ ಬಂದ ದಕ್ಷಬ್ರಹ್ಮನು ಅಹಂಕಾರದಿಂದ ಆ ಶಿವನ ಸಭೆಯನ್ನು ಪ್ರವೇಶಿಸಿದನು. ೧೯

ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳಿಂದ ನಮಿಸಿಕೊಳ್ಳ ತಕ್ಕವನೂ, ಸಮಸ್ತವೇದಾಗಮಗಳ ಸ್ತೋತ್ರಕ್ಕೆ ಪಾತ್ರನಾದವನೂ, ಮನುಮುನಿಗಳ ಮನೋನೇತ್ರಗೋಚರನೂ ಆದ ಪರಶಿವನನ್ನು ಲೆಕ್ಕಿಸದೆ ತನ್ನ ಅಳಿಯನೆಂಬ ನಿಮಿತ್ತ ಅವನಿಂದ ವಂದನೆಯನ್ನು ಕೈಗೊಳ್ಳಲಿಚ್ಛಿಸಿ,ಗರ್ವಾ

ವಿಷ್ಮನಾಗಿ ಆ ದಕ್ಷಬ್ರಹ್ಮನು ಕೆಂಡದ ತೊಡಿಗೆಗೆ ಹುನವಿಟ್ಟ ಅರಗಿನ ಪುತ್ಥ ಳಿಯಂತೆ ಶಿವನ ಸಭೆಯನ್ನು ಪ್ರವೇಶಿಸಿದನು. ೨೦

ಈ ಬಗೆಯಿಂದ ಕೈಲಾಸದ ಸಭೆಯನ್ನು ಪ್ರವೇಶಿಸಿದ ದಕ್ಷ ಬ್ರಹ್ಮನನ್ನು ಶಿವನು ಕಂಡರೂ ಕಾಣದವನಂತೆ ಉಪೇಕ್ಷಿಸಿದನು. ಆದರೆ, ಶಿವನು ಅವ ನನ್ನು ನೋಡದೆ ಮರೆತನೆಂಬುದು ಸುಳ್ಳು. ಕೋಟಿ ಬ್ರಹ್ಮಾಂಡದ ಕರ್ತೃವಾದ ಮತ್ತು ಸಂರಕ್ಷಕನಾದ ಶಿವನಿಗೆ ಇವನ ಆಗಮನವನ್ನು ಅರಿಯುವುದು ಕಷ್ಟವೇ! ಆದರೆ, ದಕ್ಷನ ಅಹಂಕಾರಕ್ಕೆ ತಕ್ಕ ಮನ್ನಣೆಯನ್ನು ಶಿವನು ಮಾಡಿದನೆಂದು ಮಾತ್ರ ತಿಳಿಯಬಹುದಲ್ಲವೇ ? ೨೧

ಈ ರೀತಿ ಸಭೆಗೆ ಬಂದರೂ ತನ್ನನ್ನು ಸನ್ಮಾನಿಸದಿರುವ ಪರಿಸ್ಥಿತಿ ಯನ್ನು ತಿಳಿದು ದಕ್ಷನು ಅಚ್ಚರಿಗೊಂಡನು. ಮರುಳನಾದ ಶಿವನು ಸತ್ಕರಿ ಸದಿದ್ದರೆ ಹೋಗಲಿ, ತನ್ನ ಮಗಳಾದ ದಾಕ್ಷಾಯಣಿಯಾದರೂ ಮರ್ಯಾದಿ ಸಬೇಡವೇ? ಎಂದು ಅವಳನ್ನು ನಿರೀಕ್ಷಿಸಿದನು. ಆದರೆ, ಗಂಡನು ಗೌರವಿಸ ದಿರುವವರನ್ನು ಹೆಂಡತಿಯು ಪುರಸ್ಕರಿಸುವುದು ಧರ್ಮವಲ್ಲವೆಂದು ತಿಳಿದು ದಾಕ್ಷಾ ಯಣಿಯು ಮೌನವನ್ನು ವಹಿಸಿದಳಲ್ಲದೆ ಬೇರೆಯಲ್ಲ. ದೊರೆಯ ಕಿರೀಟದ ಮುತ್ತು ತನ್ನ ಜನ್ಮಸ್ಥಳವಾದ ಚಿಪ್ಪನ್ನು ಇಳಿದಾದರದಿಂದ ಕಂಡಂತೆ ತಂದೆಯಾದ ತನ್ನನ್ನು ತಿರಸ್ಕಾರದಿಂದ ನೋಡಿದ ತನ್ನ ಮಗಳನ್ನೂ, ತನಗೆ ಯಾರೂ ಸನ್ಮಾನವನ್ನು ಮಾಡದಿರುವ ಆ ಸಭೆಯನ್ನೂ ಕಂಡು ದಕ್ಷನು ತನ್ನ ಮನಸ್ಸಿನಲ್ಲಿ ಹಳಹಳಿಸಿದನು. ೨೨

ಆಗ ಆ ಸಭಾಜನರು ಈ ದಕ್ಷನು ಎಂತಹ ಪಾತಕವನ್ನು ಮಾಡಿರು ವನೋ ! ಅಲ್ಲವಾದರೆ ಶಿವನೂ, ಶಿವೆಯೂ ಇವನನ್ನು ಮನ್ನಿಸುವುದಿಲ್ಲವೇ ಕೆ? ಅವರ ಅಂತಸ್ಥವನ್ನು ಅರಿಯದೆ ಈ ದಕ್ಷನನ್ನು ಈ ಶಿವಸಭೆಯಲ್ಲಿ ಗೌರವಿ ಸುವುದು ನಮಗೆ ಉಚಿತವಲ್ಲವೆಂದು ಬಗೆದು ಸಭೆಯು ಸುಮ್ಮನಿದ್ದಿತು. ಹೀಗೆ ತನಗಾದ ಅಪಾರವಾದ ಅಪಮಾನದಿಂದ ಚಿಂತೆಯೆಂಬ ವನಕೆಯಿಂದ ಕುಟ್ಟ ಪಟ್ಟ ದೇಹವುಳ್ಳ ದಕ್ಷನು, ವಿಪುಲವಾದ ಸಂತಾಪದಿಂದಲೂ, ಕೋಪಾವೇಶದಿಂ ದಲೂ ಮುಂದುರಿಯದೆ ತನ್ನ ಆಲೋಚನಾ ಗೃಹಕ್ಕೆ ಬರುತ್ತಿದ್ದನು. ೨೩

ಆ ಸಮಯದಲ್ಲಿ ಪಾಪಾತುರನಾದ ದಕ್ಷಬ್ರಹ್ಮನು ನಾನು ಅಜ್ಞಾನದಿಂದ ಮುಂದಾಲೋಚನೆಯಿಲ್ಲದೆ ಕೈಲಾಸಕ್ಕೆ ಹೋದೆನೆಂದು ಕರೆಗಟ್ಟಿದ ಬಿರುಗೋಪದಿಂದ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ ಬರುತ್ತಿದ್ದನು. ಆಗ ಅವನು ಕೊಂಚದೂರ ನಡೆಯುವುದು, ಅಲ್ಲಲ್ಲಿಯೇ ನಿಲ್ಲುವುದು, ಮಾರ್ಗ ಮಧ್ಯೆ ಬರುವವರನ್ನು ಕುರಿತು ನಾನಾಬಗೆಯಿಂದ ಆಲೋಚಿಸುವುದು, ನಿಟ್ಟುಸಿರು ಬಿಡುವುದು, ಶಿವನನ್ನು ಬಯ್ಯುವುದು ಎಂಬೀ ಲಕ್ಷಣಗಳಿಂದ ಕೂಡಿ ತನ್ನ ಪಟ್ಟಣದ ಕಡೆಗೆ ನಡೆಯುತ್ತಿದ್ದನು. ೨೪

ಆ ದಕ್ಷಪಿತಾಮಹನು ಲೋಕದ ಹಲವು ರಾಜಾಧಿರಾಜರುಗಳಿಂದ ಸನ್ಮಾನವನ್ನು ಹೊಂದಿದ, ದೇವಾಧಿದೇವತೆಗಳಿಂದ, ಎರಗಿಸಿಕೊಂಡ ತನ್ನ ಅನುಪಮವಾದ ಪರಾಕ್ರಮಕ್ಕೆ ಎಂತಹ ದುರ್ಗತಿ ಬಂದಿತು ? ಎಂಬ ಸಂಕಟದಿಂದ ತಿರುಗಾಡುವ ಚಿಂತಾಚಿತ್ರವೋ ? ಸ್ವೈರಗಿನ ಸಾಕಾರವೊ ? ಕೋಪವನ್ನು ಎರಕಹೊಯ್ದು ಮಾಡಿದ ಪುತ್ಥಳಿಯೋ? ಎಂಬಂತೆ ನಡೆದು ಬಂದು ತನ್ನ ಪಟ್ಟಣವನ್ನು ಪ್ರವೇಶಿಸಿದನು. ೨೫

ಆಗ ಅವನು ತನ್ನನ್ನು ಎದುರುಗೊಳ್ಳಲು ಬಂದ ಆನೆ, ಕುದುರೆ, ಪದಾತಿ ಮೊದಲಾದ ಸೈನಿಕರನ್ನೂ, ಕಹಳೆ, ಭೇರಿ ಮೊದಲಾದ ನಾನಾ ವಾದ್ಯಗಳನ್ನೂ ಗಮನಿಸದೆ ತನ್ನನ್ನು ಆವರಿಸಿದ ಅಪಾರವಾದ ದುಃಖಾಪಮಾನಗಳಿಂದ ಪುರಪ್ರವೇಶ ಮಾಡಿದನು. ೨೬

ಆಗ ರೋಷಪೂರ್ಣನಾದ ದಕ್ಷಬ್ರಹ್ಮನು ತಾನು ತನ್ನ ತೊಡೆಗಳನ್ನು ಬಡಿದುಕೊಳ್ಳುತ್ತ, ನಾನು ಒಂದು ಮಹಾಯಜ್ಞವನ್ನು ಮಾಡುವೆನು; ಶಿವನ ದೇವತ್ವವನ್ನು ಸುಡುವೆನು; ಶೂಲಿಯನ್ನು ನಾನಾಪ್ರಕಾರವಾಗಿ ಹಿಂಸಿಸುವೆನು ; ನನ್ನ ಓಲಗಶಾಲೆಗೆ ಸಮಸ್ತ ದೇವತೆಗಳನ್ನ ಕರೆಯಿಸುವೆನು ನನ್ನ ಮಾತುಕೇಳದ ದೇವತೆಗಳ ಮತ್ತು ಮನುಮುನಿಗಳ ಶಿರಚ್ಛೇದನ ಮಾಡಿಸುವೆನು ; ಎಂದು ಮೊದಲಾಗಿ ಪಾಪಾತುರಬುದ್ಧಿಯಿಂದ ಗರ್ಜಿಸತೊಡಗಿದನು. ೨೭

ಆ ಕೂಡಲೇ ಆತುರದಿಂದ ಮಂತ್ರಿ ವಿದಗ್ಧನನ್ನು ಕರೆಸಿ ಸಂದರ್ಭವನ್ನು ಕುರಿತು ಆಲೋಚಿಸಿ, ಅಂದು ತನಗಾದ ಅಪಮಾನವನ್ನು ಹೋಗಲಾಡಿಸಿ,

ರುದ್ರನ ಸರ್ವೇಶತ್ವವನ್ನು ಧ್ವಂಸಮಾಡಿ ತಾನೇ ಲೋಕೇಶ್ವರನಾಗುವಂತೆ ಮಹಾಯಾಗದ ಮುಖದಿಂದ ಶಕ್ತಿಯನ್ನು ಸಂಪಾದಿಸಿ, ಲೋಕದಲ್ಲಿ ತನ್ನ ಪ್ರಭುತ್ವವನ್ನು ಹೆಚ್ಚಿಸಿಕೊಳ್ಳುವಂತೆ ಮಾಡಬೇಕೆಂದೂ, ಅಂತಹ ಮಹಾ ಯಾಗಕ್ಕೆ ತಕ್ಕ ಪದಾರ್ಥಗಳನ್ನು ಕೂಡಲೇ ಸಂಗ್ರಹಿಸಬೇಕೆಂದೂ, ಕ್ಷಣವೂ ಬಿಡುವಿಲ್ಲದೆ ಆ ಯಾಗಕ್ಕೆ ಬೇಕಾಗುವ ಎಲ್ಲ ಪದಾರ್ಥಗಳನ್ನೂ ತರಿಸಬೇಕೆಂದು ನಿರೂಪಿಸಿದನು. ೨೮

ಆಗ ಆ ವಿವೇಕಿಯಾದ ಮಂತ್ರಿಯು, ದಕ್ಷನ ಈ ಉದ್ಯಮವನ್ನು ಕಂಡು ಮರುಗಿ, ಈ ಮುಂದೆ ಹೇಳುವಂತೆ ವಿವೇಕವನ್ನು ಬೋಧಿಸತೊಡಗಿದನು:— ಎಲ್ಲ ವಸ್ತುಗಳನ್ನೂ ಸೃಷ್ಟಿಸಬಲ್ಲದು ಭೂಮಿ. ಆದರೆ, ಆ ವಸ್ತುಗಳೆಲ್ಲ ಭೂಮಿಯನ್ನು ಸೃಷ್ಟಿಸಬಲ್ಲವೇ ? ಶಿವನು ಒಲಿದರೆ ಯಾಗ ಸಹಸ್ರದ ಫಲ ಪ್ರಾಪ್ತವಾಗುತ್ತದೆ. ಆ ಯಾಗಗಳು ಶಿವನ ಪದವಿಯನ್ನು ಕೊಡಬಲ್ಲವೇ ? ಪ್ರಭುವೇ ಆದೇಕೆ ಹೀಗೆ ಮೂರ್ಖನಾಗಿ ಮಾತನಾಡುವೆ ? ಎಲ್ಲಿಯೂ ಸಲ್ಲದ ಹೊಲ್ಲದ ಕಾರ್ಯವನ್ನು ಉದ್ಯೋಗಿಸಿದೆ ? ಈ ಕಾರ್ಯವು ನಿನಗೆ ಶುಭ ಪ್ರದವಾದುದಲ್ಲ, ಎಂದು ಬುದ್ಧಿ ಹೇಳಲು ಪಾಪಿಯಾದ ದಕ್ಷನು ಅವನ ಬೋಧೆಯನ್ನು ತಿರಸ್ಕರಿಸಿ ಈ ಪ್ರಕಾರ ಹೇಳಿದನು. ೨೯

ಎಲೈ ಮಂತ್ರಿಯೇ, ಏನು ? ಹೀಗೆ ಮಾತನಾಡುವೆ ? ಯಾಗದಿಂದಾಗದ ಕಾರ್ಯವಾವುದು ? ವಸಿಷ್ಠಮುನಿಯು ಶಪಿಸಿದ ಮಹಾಭೂಪನಾದ ತ್ರಿಶಂಕುವಿನ ತಂದೆಯಾದ ತ್ರಯ್ಯಾರುಣಿಯನ್ನು ಸ್ವರ್ಗಕ್ಕೆ ಕಳಿಸಿದ ಬ್ರಹ್ಮನ ಮೇಲಿನ ಕೋಪದಿಂದ, ವಿಶ್ವಾಮಿತ್ರಋಷಿಯು ಯಜ್ಞದ ಮುಖದಿಂದ ಸಮಸ್ತ ವಸ್ತುಗಳನ್ನು ಸೃಷ್ಟಿಸಲಿಲ್ಲವೇ ? ಆದ್ದರಿಂದ ಘನತಮವಾದ ಯಜ್ಞಗಳಿಂದ ಸಾಧ್ಯವಾಗದಿರತಕ್ಕುದಾವುದು ? ಕಾರಣ ನೀನು ನಾನು ಕೈಗೊಂಡ ಕಾರ್ಯಕ್ಕೆ ಎದುರುಬರದೆ ನನಗೆ ಸಹಾಯಕನಾಗು. ಇಲ್ಲವಾದರೆ ನಿನ್ನನ್ನು ಈಕ್ಷಣವೇ ಕೊಂದುಬಿಡುವೆನು ಎಂದನು. ಆಗ ಈ ಮುಂದೆ ಹೇಳುವಂತೆ ಇವರೀರ್ವರನಡುವೆ ಸಂಭಾಷಣೆಯಾಯಿತು. ೩೦

ಮಂತ್ರಿವಿದಗ್ಧ:-ಎಲೈ ದಕ್ಷ ಬ್ರಹ್ಮನೇ ಕೊಂದರೂ ಕೊಲ್ಲು; ಶಿವದ್ವೇಷಮಯವಾದ ಈ ಯಾಗವನ್ನು ಕೈಗೊಳ್ಳಬೇಡ.

ದಕ್ಷಬ್ರಹ್ಮ:- ಛೆ! ಛೆ! ನೀನು ಎಷ್ಟು ಹೇಳಿದರೂ ನಾನು ಈ ಯಾಗವನ್ನು ಬಿಡುವುದಿಲ್ಲ.

ಮಂತ್ರಿ:- ಇದು ಬಹಳ ಅಯೋಗ್ಯ ಕಾರ್ಯ.

ದಕ್ಷ:- ಇದು ಉತ್ತಮ ಕಾರ್ಯ. ಲೇಸು ಲೇಸು.

ಮಂತ್ರಿ:- ಅಯ್ಯೋ! ದಕ್ಷಪಿತಾಮಹಾ, ಪೂಜ್ಯನಾದ ನೀನು ಲೋಕದ ನಿಂದೆಗೆ ಗುರಿಯಾಗುವೆಯಲ್ಲ.

ದಕ್ಷ:-ಆದದ್ದಾಗಲಿ!

ಮಂತ್ರಿ:- ಖಂಡಿತವಾಗಿಯೂ ಕೆಟ್ಟುಹೋಗುವೆ.

ದಕ್ಷ:- ಕೆಟ್ಟರೆ ಕೆಡುತ್ತೇನೆ. ಈ ಯಾಗವನ್ನು ಬಿಡುವುದಿಲ್ಲ. ಖಂಡಿತ.

ಮಂತ್ರಿ:- ನಿನ್ನ ಮಗಳು ಇದರಿಂದ ಕುಪಿತಳಾಗುವುದಿಲ್ಲವೇ?

ದಕ್ಷ:- ಬಿಡು ಬಿಡು. ಆದರಾಗಲಿ. ಕೋಪಿಸಿಕೊಳ್ಳಲಿ. ಚಿಂತೆಯಿಲ್ಲ.

ಮಂತ್ರಿ:- ನಿನ್ನ ಕೀರ್ತಿ ವ್ಯರ್ಥವಾಗುತ್ತದೆ.

ದಕ್ಷ:- ಇದರಿಂದ ನನಗೆ ಕೀರ್ತಿಯುಂಟು.

ಮಂತ್ರಿ:- ಮನಬಂದಂತೆ ಮಾಡುವುದನ್ನು ಬಿಡು.

ದಕ್ಷ:- ನಾನು ಖಂಡಿತವಾಗಿಯೂ ಬಿಡುವುದಿಲ್ಲ. ಹಾಗೆ ಬಿಟ್ಟರೆ ನೀನೇ ನನ್ನನ್ನು ನೋಡಿ ನಗು. ಎಂದು ಕೋಪದಿಂದ ಹೇಳಿದನು. ೩೧

ಆಗ ಮಂತ್ರಿಯು ನೀನು ಯಾಗವನ್ನು ಕೈಗೊಂಡರೆ .ಶಿವನ ಬಂಟರಾದ ಗಣಂಗಳು ಬಂದು ಹೊಗದ ಸ್ಥಳವಾವುದು? ಎಂದು ಕೇಳಲು ಆಗ ದಕ್ಷನು ಶ್ರೀ ಕ್ಷೇತ್ರಕಾಶಿಗೆ ಪಡುವಣ ದಿಕ್ಕಿನ ರಮ್ಯಾಶ್ರಮದಲ್ಲಿರುವ ಕನಖಳ ಪುರದಲ್ಲಿ ನಾನು ಯಾಗವನ್ನು ಮಾಡುವೆನೆಂದನು. ಆಗ ಮಂತ್ರಿಯು ಯಾಗವನ್ನು ಮಾಡುವ ಋತ್ವಿಜರಾರು? ಎಂದು ಕೇಳಲು ಮುನೀಶ್ವರರು. ಎಂದನು. ಯಾಗವನ್ನು ,ನಡೆಸುವ ಸಂರಕ್ಷಕನಾರು? ಎಂದು ಮಂತ್ರಿಯು ಕೇಳಲು, ಶ್ರೀಮಹಾವಿಷ್ಣುವೆಂದೂ, ಯಾಗಶಾಲೆಯ ಕಾಹಿನ ಕಡುಗಲಿಗಳು ದಿಕ್ಪಾಲಕರೆಂದೂ ದಕ್ಷನು ಉತ್ತರ ಕೊಟ್ಟನು. ಆಗ ವಿದಗ್ಧಮಂತ್ರಿಯು ಇವರೆಲ್ಲರೂ ಶಿವನಿಲ್ಲದ ಯಾಗಕ್ಕೆ ಬರಲಾರರು. ಇದನ್ನು ನೀನು ನೆನಪಿನಲ್ಲಿಡು ಎಂದು ಹೇಳಿದನು. ೩೨

ದಕ್ಷ:- ನಾನು ಕರೆದರೆ ಬರುವುದಿಲ್ಲವೆಂದು ಹೇಳುವ ಮುನಿಗಳನ್ನೂ, ಸುರರನ್ನೂ ಕೊಂದು ಹಾಕುತ್ತೇನೆ.

ಮಂತ್ರಿ:-ನೀನು ಹೀಗೆ ಭಯೋತ್ಪಾತಮಾಡಿದರೆ ಯಾಗಕ್ಕೆ ಬರತಕ್ಕವರಾರು?

ದಕ್ಷ:- ನಿಜ. ಮಂತ್ರಿಯೇ ನನ್ನ ಯಾಗಕ್ಕೆ ಎಲ್ಲರೂ ಬರುವುದಕ್ಕೆ ತಕ್ಕ ಉಪಾಯವೇನು ಹೇಳು?

ಮಂತ್ರಿ:- ಶಿವನದ್ವೇಷವನ್ನು ಮಾಡದೆ ಎಲ್ಲರನ್ನೂ ಉಪಾಯದಿಂದ ಕರೆತಂದು ಯಾಗವನ್ನು ಹೂಡು. ನಿನ್ನ ಈ ಬಲ ಪ್ರದರ್ಶನದಿಂದ ಕಾರ್ಯ ಸಾಧನೆಯಾಗುವುದಿಲ್ಲ.

ದಕ್ಷ:- ಒಳ್ಳೆಯಉಪಾಯ. ನೀನು ಹೇಳಿದಂತೆಯೇ ಕಾರ್ಯವನ್ನು ಕೈಗೊಳ್ಳುತ್ತೇನೆ. ೩೩

ಆದಿಶೇಷನ ಪದವಿಯನ್ನು ಭೂಮಿಯ ಒಂದು ಚಿಕ್ಕಹಾವು ಅಪೇಕ್ಷಿಸುವಂತೆ, ಮೇರುಪರ್ವತದ ಮಹತ್ವವನ್ನು ಒಂದು ಒಣಗಿದ ಗುಡ್ಡ ಬಯಸುವಂತೆ, ಸಮುದ್ರದ ಗಂಭೀರತೆಯನ್ನು ಅಡವಿಯ ಒಂದು ಸಣ್ಣ ಹಳ್ಳ ಬಯಸುವಂತೆ, ಕಲ್ಪವೃಕ್ಷದ ಔದಾರ್ಯವನ್ನು ಭೂಮಿಯ ಒಂದು ಒಣಗಿದ ತಾರೆಯಮರ ಸ್ಪರ್ಧಿಸುವಂತೆ ಸರ್ವಜ್ಞನೂ, ಸರ್ವೇಶ್ವರನೂ ಆದ ಪರಮೇಶ್ವರ ಶಂಕರನ ಪದವಿಯನ್ನು ದಕ್ಷನು ಬಯಸಿ ಗಣಕರನ್ನು ಬರಮಾಡಿದನು. ೩೪.

ಆ ಪಾಪಾತುರನಾದ ದಕ್ಷಬ್ರಹ್ಮನು ಅವಸರವಸರವಾಗಿ ಈ ದಿನವೇ ಹೊರಟು ಬರಬೇಕೆಂಬ ಅರ್ಥದ ಪತ್ರಗಳನ್ನು ವಿಷ್ಣು, ಬ್ರಹ್ಮ, ದಿಕ್ಪಾಲರು, ದೇವತೆಗಳು, ವಿದ್ಯಾಧರರು, ಕಿನ್ನರರು, ಖೇಚರರು, ಗರುಡರು, ಉರಗರು, ಗುಹ್ಯಕರು, ಗಂಧರ್ವರು, ಮರುದ್ಗಣಗಳು, ತುರಗಾನನರು, ಮುನಿಗಳು ಮೊದಲಾದವರಿಗೆಲ್ಲ ಬರೆದುಕಳುಹಿಸಿದನು. ೩೫

ಆತುರದಿಂದ ಕಾಶಿಗೆ ಪಶ್ಚಿಮ ದಿಕ್ಕಿನಲ್ಲಿರುವ ಕನಖಳಪುರದಲ್ಲಿ ಜಗದಗಲದ ಒಂದು ದೊಡ್ಡ ಓಲಗಶಾಲೆಯನ್ನು ಆಪಾಪಿಯಾದ ದಕ್ಷನು ಏರ್ಪಡಿಸಿದನು. ಅಲ್ಲಿ ನೆರೆದ ಎಲ್ಲ ಮುನಿಗಳನ್ನೂ, ದೇವತೆಗಳನ್ನೂ ನನಗೆ ಒಂದು ಯಾಗವನ್ನು ಮಾಡಲು ಅಪ್ಪಣೆಯನ್ನು ಕೊಡಬೇಕು ಎಂದು ಪ್ರಾರ್ಥಿಸಿದನು. ಆಗ ಇದು ಶಿವದ್ರೋಹಮಯವಾದ ಯಾಗವೆಂದು ತಿಳಿಯದೆ ಅವರೆಲ್ಲರೂ ಈ

ಯಾಗಕ್ಕೆ ತಮ್ಮ ಒಪ್ಪಿಗೆಯನ್ನಿತ್ತು ಅಂತೆಯೇ ತಮ್ಮ ನಾಶದ ಸಮ್ಮತಿಯನ್ನೂ ಒಡಂಬಟ್ಟರು. ೩೬

ಆಗ ಯಾಗಾಭಿಜ್ಞರಾದ ಮುನಿಗಳನ್ನೆಲ್ಲ ಕರೆಯಿಸಿ ಯಾವ ಯಾಗವು ಶ್ರೇಷ್ಠವಾದದ್ದೆಂದು ದಕ್ಷನು ಪ್ರಶ್ನಿಸಲು, ಅವರು ಅತ್ಯಗ್ನಿಷ್ಟೋಮ ಎಂದು ಉತ್ತರ ಹೇಳಿದರು. ಕೂಡಲೇ ಯಜ್ಞದ್ರವ್ಯಗಳನ್ನು ತರಹೇಳಿ, ಭೂಮಿಯನ್ನು ಶೋಧಿಸಿ, ಶಾಲಾವೇದಿಕೆ ಮೊದಲಾದುವುಗಳನ್ನು ಮಾಡಿಸಲು ತೊಡಗಿದನು. ೩೭

ಅಲ್ಲಿಂದ ಮುಂದೆ ದೊಡ್ಡ ಕುಂಡ, ಡಮರುಗಾಕಾರದ ವೇದಿಕೆ ಮೊದಲಾದ ಯಾಗ ಸಿದ್ಧತೆಯ ಕಾರ್ಯಕ್ರಮಗಳನ್ನು ಆತುರದಿಂದ ಮಾಡಿಸಿದನು. ೩೮

ಹೊಸಮೊರ, ಸುರಭಿ, ಕಪಾಲ, ಉಲೂಖ, ಮೃಗಾಜಿನ, ಸರ್ಪಿ, ಸೋಮ, ಕುಶ, ಮಹಾವಿರಣಿ, ವಿಶಾಣ, ಶಂಖ, ಶಶಕ, ಬಾಧಿರಿ, ಉಪಶಮಿ, ಪಶು, ಶಸ್ತ್ರ, ರಜ್ಜು ಮೊದಲಾದ ಯಾಗ ಸಾಮಗ್ರಿಗಳನ್ನು ದ್ರೋಹಿಯಾದ ದಕ್ಷನು ಸಿದ್ಧಗೊಳಿಸಿದನು. ೩೯

ಹೋತೃ, ಸದಸ್ಯ, ಬ್ರಹ್ಮ, ಅಧ್ವರ್ಯ, ಮೊದಲಾದ ಯಾಗಕ್ಕೆ ಅಂಗವಾದ ಎಲ್ಲ ಸಿದ್ಧತೆಗಳನ್ನೂ ಮಾಡಿ ತನ್ನ ಮರಣದ ಸಿದ್ಧತೆಯನ್ನು ತಾನೇ ಮಾಡಿಕೊಳ್ಳುತ್ತಿರುವ ಆ ದಕ್ಷನು ಯಾಗ ರಕ್ಷಣೆಗೆ ದಿಕ್ಪಾಲಕರನ್ನು ಕರೆದನು. ೪೦

ನೀವೆಲ್ಲರೂ ನಿಮ್ಮ ಸ್ಥಲಗಳನ್ನು ಭದ್ರವಾಗಿ ಕಾದಿರಬೇಕು ; ಎಂದು ಅವರಿಗೆ ಅಪ್ಪಣೆಯನ್ನು ಕೊಟ್ಟು, ಮುಕುಂದನಿಗೆ ಅಗ್ರಾಸನವನ್ನಿತ್ತು ಮತ್ತುಳಿದ ಮಾನ್ಯರಿಗೆಲ್ಲ ಉಚಿತಾಸನವನ್ನು ಸಲ್ಲಿಸಿ, ಕೈಯಲ್ಲಿ ಕೋಡನ್ನು ಹಿಡಿದು ಮೈಗೆ ಬೆಣ್ಣೆಯನ್ನು ಬಳಿದುಕೊಂಡು, ಮೃಗದೊವಲನ್ನು ಆಚ್ಛಾದಿಸಿಕೊಂಡು, ಆ ಪಾಪಿಯಾದ ದಕ್ಷನು ಯಜ್ಞಾರಂಭಕ್ಕೆ ಸಿದ್ಧನಾದನು. ೪೧

ಹೀಗೆ ಯಾಗವು ಪ್ರಾರಂಭವಾಗುವ ಕಾಲದಲ್ಲಿ ಸರ್ವದ್ರವ್ಯ ಸಂಸ್ಕಾರ ಪರಿಷೇಚನ ಪರಿಸ್ತರಣಾದಿಳಗನ್ನು ಒಪವಿಸಿ ಯಾಗವನ್ನು ಪ್ರಾರಂಭಿಸಲು, ಯಾಗ ಪ್ರಾರಂಭಕ್ಕೆ ಅನುಜ್ಞೆಯನ್ನು ಕೊಡುವ ಮುನಿಗಳೆಲ್ಲರೂ ಬಂದರೆ

ನೋಡಿ ಎನಲು, ದಧೀಚಿಮಹರ್ಷಿಯು ಬಂದಿಲ್ಲೆಂಬ ಉತ್ತರವನ್ನು ತಿಳಿದು ತತ್ಕ್ಷಣವೇ ಮೃತ್ಯುವನ್ನು ಕರೆಯಲು ಕಳಿಸುವಂತೆ ಆ ದಧೀಚಿಯನ್ನು ಕರೆಯಲು ಸೇವಕರನ್ನು ಕಳುಹಿಸಿದನು. ೪೨

ಅಲ್ಲಿಂದ ಹೊರಟು ಬಂದ ಸೇವಕರು ಪಂಪಾಕ್ಷೇತ್ರದಲ್ಲಿ ಮುನಿಗಳ ಸಮೂಹದಲ್ಲಿ ಪ್ರಸನ್ನಚಿತ್ತನಾಗಿ ಪ್ರತ್ಯಕ್ಷ ಪರಮೇಶ್ವರನಂತಿದ್ದ ದಧೀಚಿಗೆ ದಕ್ಷನ ಬಿನ್ನಹವನ್ನು ಸಮರ್ಪಿಸಿದರು.

ಆಗ ಈ ಮುಂದೆ ಹೇಳುವಂತೆ ಅಲ್ಲಿ ಸಂಭಾಷಣವಾಯಿತು.

ದಧೀಚಿ:— ಯಾಗದ ಪ್ರಾರಂಭವೆಂದು ?

ಸೇವಕರು:— ಈದಿನವೇ !

ದಧೀಚಿ:—ಯಾವ ಹೊತ್ತು?

ಸೇವಕರು:— ಈ ಹೊತ್ತೇ

ದಧೀಚಿ:— ಕೈಲಾಸ ಪತಿಯಾದ ಶಂಕರನು ಬಂದಿರುವನೇ ? ಮತ್ತುಳಿದ ಋಷಿ ಶ್ರೇಷ್ಠರೆಲ್ಲರೂ ಬಂದಿರುವರೇ ?

ಸೇವಕರು:— ಎಲ್ಲರೂ ಬಂದಿರುವರು.

ಎಂದು ಹೇಳಲು ಹರುಷಾತಿರೇಕದಿಂದ ಶಿವಭಕ್ತಿ ಪುಂಗವನಾದ ದಧೀಚಿಯು ಸಂಭ್ರಮದಿಂದ ಹೊರಟನು. ೪೩

ನಾಲ್ಕುವೇದಗಳಿಗೆ ಸಿಲುಕದಿರುವ, ಅಜ ಹರಿಗಳಿಗೆ ಅಸದಳನಾದ, ಅಪ್ರತಿಮನೂ, ಅಭವನೂ ಆದ ಎನ್ನೊಡೆಯ ವಿರೂಪಾಕ್ಷನನ್ನು ಇಂದು ಕಣ್ಣಾರೆಕಂಡು ಸಂತೋಷಪಡುವೆನು, ಎಂಬ ಉತ್ಸಾಹದಿಂದ ಇಳಿಯಬಿದ್ದ ಜಡೆ, ಸುತ್ತಿದ ಚರ್ಮ, ಅಂತಿಂತು ಬಳಿದ ಭೂತಿ, ಇವುಗಳಿಂದ ಕೂಡಿ ಆ ಮಹಾತ್ಮನಾದ ದಧೀಚಿಯು ಬಹು ವೇಗದಿಂದ ದಕ್ಷನ ಯಾಗಶಾಲೆಯನ್ನು ಬಂದು ಸೇರಿದನು. ೪೪

ಆಗ ಆ ದಧೀಚಿಯು ಆ ಯಾಗಶಾಲೆಯನ್ನೆಲ್ಲ ತಿರುತಿರುಗಿನೋಡಿ, ಅಧ್ಯಕ್ಷಸ್ಥಾನದಲ್ಲಿಯೂ, ವೇದಗಳಶಿರೋಭಾಗದಲ್ಲಿಯೂ, ಮಂತ್ರಗಳ ಮಸ್ತಕದಲ್ಲಿಯೂ, ಜಟಾಮಕುಟ ಕುಂಡಲ ಧಾರಿಗಳಲ್ಲಿಯೂ ತನ್ನ ಇಷ್ಟ

ಮೂರ್ತಿಯಾದ ಶಿವನು ಇಲ್ಲದಿರುವುದನ್ನು ಕಂಡು, ಕುಪಿತನಾಗಿ ಯಾಗಶಾಲೆಯನ್ನು ಸುಟ್ಟು ಬೂದಿ ಮಾಡುತ್ತೇನೆ ಎಂದು ಅಬ್ಬರಿಸುವವನಾದನು. ೪೫

ಆಗ ಘುಡಿಘುಡಿಸುತ್ತ ಕೋಪಾರೂಢನಾದ ಆ ದಧೀಚಿಗೂ, ಶಿವದ್ರೋಹಿಯಾದ ದಕ್ಷನಿಗೂ ಈ ಮುಂದೆ ಹೇಳುವಂತೆ ಸಂಭಾಷಣೆಯಾಯಿತು.

ದಧೀಚಿ:-ಎಲೈ ದಕ್ಷಾ ಪುರಾಂತಕನಾದ ಶಂಕರನೆಲ್ಲಿ? ನಮ್ಮ ಪರಶಿವನೆಲ್ಲಿ? ಜಾಗ್ರತೆ ತೋರಿಸು.

ದಕ್ಷ:- ಪುರಾಂತಕ ಎಂದರೆ ಯಾರು!

ದಧೀಚಿ:- ಅಧ್ವರದ ಒಡೆಯನು. ಜಗತ್ಪತಿಯಾದ ಶಂಕರನು,

ದಕ್ಷ:- ಅವನೇಕೆ ಇಲ್ಲಿಗೆ?

ದಧೀಚಿ:- ಈ ಯಾಗವನ್ನು ರಕ್ಷಿಸ·ಬೇಡವೆ?

ದಕ್ಷ:- ಓಹೋ! ಬೇಡ,

ದಧೀಚಿ:- ಯಾವ ಕಾರಣ ಬೇಡವೆನ್ನುವೆ?

ದಕ್ಷ:- ಅವನ ಹೆಸರನ್ನು ಇಲ್ಲಿ ಎತ್ತಬೇಡ. ಅವನು ಇಲ್ಲಿಗೆ ಅಯೋಗ್ಯನು.

ದಧೀಚಿ:- ಛೀ! ಬಿರುನುಡಿಯನ್ನಾಡುವೆ. ಅವನು ಪವಿತ್ರನು.

ದಕ್ಷ:- ಅವನು ಮೂಳೆಗಳನ್ನೂ, ಚರ್ಮವನ್ನೂ, ತಲೆಬುರುಡೆಗಳನ್ನೂ ಅಲಂಕರಿಸಿಕೊಳ್ಳುವವನು. ಸುಡುಗಾಡಿನಲ್ಲಿ ವಾಸಿಸುವವನು, ಅಪವಿತ್ರನು. ಎಂದು ಹೇಳಿದನು. ೪೬

ಈ ಬಗೆಯಾಗಿ ದಕ್ಷನು ಶಿವನಿಂದೆಯನ್ನು ಮಾಡಿದುದನ್ನು ಕೇಳಿ ದಧೀಚಿಮುನಿಯು ಘನ ಮಂಗಳಮಯನಾದ ಶಿವನು ಯಾವುದನ್ನು ಉಡುವನೋ ಅದು ಪವಿತ್ರ. ಯಾವುದನ್ನು ತೊಡುವನೋ ಅದು ಪುನೀತ. ಆ ಮಹಿಮನ ವಿಷಯವನ್ನು ಪಾಪಿಯಾದ ನೀನೇನು ಬಲ್ಲೆ? ನಿನ್ನ ವಿಷಯ ಹಾಗಿರಲಿ, ಸನ್ಮಾರ್ಗದಲ್ಲಿ ನಡೆದ ವಿಷ್ಣು ಬ್ರಹ್ಮೇಂದ್ರಾದಿಗಳೂ, ಮನುಮುನಿಗಳೂ, ಶಿವರಹಿತವಾದ ಈ ಯಾಗಕ್ಕೆ ಒಪ್ಪಿಗೆ ಯಿನ್ನಿತ್ತರೆಂತು? ಯಾಗಾಧಿಪತಿಯಾದ ಆ ಮಹಾಮಹಿಮನನ್ನು ಮರೆತರೆಂತು? ಎಂದನು. ಆಗ ದಕ್ಷನು ನೀನು ಹೇಳಿದ ಎಲ್ಲ ಮಹಿಮೆಗಳೂ ನನ್ನ ಅಳಿಯ ನೆನಿಸಿಕೊಳ್ಳಲಾರವು ಎಂದು ಮುನಿಯನ್ನು ಮೂದಲಿಸಿದನು. ೪೭

ಈ ಬಿರುನುಡಿಗಳಿಂದ ಕುಪಿತನಾದ ಆ ಋಷಿಯು ಆ ನಿನ್ನ ಅಳಿಯನು ಹರಿಯಜರಂತೆ ಅಳಿಯತಕ್ಕವನಲ್ಲ. ನಿನ್ನ ಅಧ್ವರದಂತೆ ಅಳಿಯ ತಕ್ಕವನಲ್ಲ. ಅಹಂಕರಿಸಿದವರನ್ನು ಅಳಿಸತಕ್ಕವನು. ಅವನು ಸಾಮಾನ್ಯ ಅಳಿಯನೆಂದು ತಿಳಿಯ ಬೇಡ ಎಂದನು. ಆಗ ದಕ್ಷನು ದಧೀಚಿಯು ಹೊಗಳಿದ ಶಿವನ। ಬಣ್ಣನೆಗೆ ಕ್ರುದ್ಧನಾಗಿ ನೀನು ಹೇಳುವ ಆ ಶಿವನು ಆರೆವೆಣ್ಣ. ಅ ಕುಲೀನ, ಅನಾಮಿಕ, ಅಬದ್ಧ, ನಿರ್ಗುಣದೈವ. ಅತಂಹ ಆ ದ್ಯುರ್ದೆವಿಯಾದ ಹರನನ್ನು ಈ ಯಾಗಶಾಲೆಯಲ್ಲಿ ನೆನೆಯಬೇಡ ಎಂದು ಹೇಳಲು, ದಧೀಚಿಮುನಿಯು ಶಿವನಿಂದೆಯನ್ನು ಕೇಳಿ ಕೋಪಿಸಿಕೊಂಡುದನ್ನು ನಾನೆಂತು ಹೇಳಲಿ! ೪೮

ಆಗ ದಧೀಚಿಯ ಕಣ್ಣಿನಲ್ಲಿ ಕೋಪಸದಕಿಡಿಗೆದರಿತು. ಉರಿಹಬ್ಬಿತು. ನುಡಿ ಬಿರುಸಾಯಿತು. ಹುಬ್ಬುಗಂಟುಬಿತ್ತು. ತುಟಿ ಅಳ್ಳಾಡಿತು. ಪೂಸಿದ ವಿಭೂತಿ ಕರಗಿತು. ಕಮಂಡಲ ಜಲ ಕುದಿಯಿತು. ಕೂದಲು ನೇರವಾದುವು. ಯೋಗ ದಂಡವು ಕೈ ಜಾರಿತು· ಈ ಪ್ರಕಾರದಿಂದ ಕೋಪಾರೂಢನಾದ ದಧೀಚಿಯು ಶಿವನಿಂದೆಯನ್ನು ಕೇಳಿ ಉದ್ರೇಕಿತನಾಗಿ ಸಭೆಯು ನಡುಗುವಂತೆ ಮಾತನಾಡಿದನು. ೪೯

ಎಲೈ ಪಾಪಿಯಾದ ದಕ್ಷನೇ ನಿನ್ನ ಯಾಗನಡೆಯದಿರಲಿ. ನಿನ್ನ ತಲೆಯು ಹುಡಿಯಾಗಲಿ. ನಿನ್ನ ಯಾಗವು ನಾಶವಾಗಲಿ. ಈ ಯಾಗಕ್ಕೆ ಸಹಾಯಕರಾದ ಹರಿಯ ಹರಣವು ಹೋಗಲಿ. ಪೂಷನ ಹಲ್ಲುಗಳು ಮುರಿಯಲಿ. ಕಾಲನ ಕೈಗಳು ಕತ್ತರಿಸಲಿ, ಇಂದ್ರನು ನೋಯಿಲಿ, ಬ್ರಹ್ಮನ ಹೆಂಡತಿಯ ಮೂಗು ಕತ್ತರಿಸಲಿ, ದಿಕ್ಪಾಲಕರು ಭಂಗಿತರಾಗಲಿ ಮಿಕ್ಕವರು ಹುಲುಹಿಡಿಯಲಿ, ನಿನ್ನ ಯಾಗವು ಸರ್ವಸ್ವನಾಶವಾಗಲಿ ಎಂದು ಶಾಪವನ್ನಿತ್ತನು. ೫೦

ಮತ್ತು ಸ್ವಾಮಿಯನ್ನು ವಂಚಿಸಿ ಕಳ್ಳತನದಿಂದ ಉಣ್ಣಲು ಬಂದ ಅಗ್ನಿಯನಾಲಗೆಯು ಸೀಳಾಗಲಿ, ದೇವತೆಗಳೆಲ್ಲಾ ಸಾಯಲಿ,-ಮಿಕ್ಕವರು ಹುಲುಹಿಡಿಯಲಿ, ತಿಳಿಯದೆ ಇಲ್ಲಿಗೆ ಬಂದುಸೇರಿರುವ ಸಕಲ ಮುನಿಸ್ತೋಮವೂ ಶಿವನ ಪಾದಗಳನ್ನು ಕ್ಷಮಾಯಾಚನೆ ಮಾಡಲಿ, ಔದ್ಧತ್ಯದಿಂದ, ಅಹಂಕಾರದಿಂದ

ಇಲ್ಲಿ ಕೂಡಿರುವವರೆಲ್ಲರೂ ವೇದಾರ್ಥದಂತೆ ನಡೆಯದೆ ನರಕಕ್ಕೆ ಹೋಗಲಿ. ಓಡಿ ಓಡಿ ಶಾಪವನ್ನು ಕೊಳ್ಳಿ ಎಂದು, ದಕ್ಷನನ್ನೂ, ಅವನ ಯಾಗ ಶಾಲೆಯನ್ನೂ ಶಪಿಸಿ, ಸಭೆಯು ಕಂಪಿಸುತ್ತಿರಲು ದಧೀಚಿಯು ಹೊರಟು ಹೋದನು. ೫೧

ಆ ದಧೀಚಿ ಮುನಿಯ ಶಾಪದಿಂದ ಕಂಪಿತರಾದ ಅಗಸ್ತ್ಯ, ವಸಿಷ್ಠ ಭೃಗು, ದೇವಲ, ಉಪಮನ್ಯು ಎಂಬ ಮುನಿಮುಖ್ಯರೂ, ಅವರ ಹಿಂದೆ ಎಂಟು ಸಾವಿರ ಋಷಿಗಳೂ ಈ ಯಜ್ಞವು ಶಿವದ್ವೇಷಮಯವೆಂದು ಅರಿಯದೆ ಬಂದೆವಲ್ಲಾ! ಶಿವನು ಇಲ್ಲಿಗೆಬರುವನೆಂದು ತಿಳಿದಿದ್ದೆವಲ್ಲಾ! ಈ ದಧೀಚಿಮಹಾ ಮುನಿಯ ಶಾಪದ ಹೊರೆಯನ್ನು ಧರಿಸುವವರಾರು? ಶಿವರ ಹಿತವಾದ ಈ ಯಾಗದಲ್ಲಿ ಇರುವುದಾದರೂ ಎಂತು? ಎಂದು ಹೇಳುತ್ತ ತಮ್ಮ ತಮ್ಮ ಆಶ್ರಮಗಳಿಗೆ ಸದ್ದಿಲ್ಲದೆ ತೆರಳಿದರು. ಮತ್ತುಳಿದ ಮೂವತ್ತೆರಡು ಸಾವಿರ ಮಂದಿ ಮುನಿಗಳು ಶಾಪಗ್ರಸ್ಥರಾಗಿ ಆ ಯಾಗ ಶಾಲೆಯಲ್ಲಿ ಉಳಿದರು. ೫೨

ಆಗ ರಾಕ್ಷಸಿಯು ಹೀರಿದ ಹಾಲಿನ ಕುಂಭವಾಯ್ತು ಆ ದಕ್ಷನ ಸಭೆ. ಸಭಿಕರು ಮುಂದೇನು ಮಾಡುವುದೆಂದು ಕಕಮಕ ವಿಡಿದರು. ಕೆಲರು ಬಂದದ್ದೇ ತಪ್ಪು. ಬಂದ ಮೇಲೆ ಹೋಗುವುದು ಸರಿಯಲ್ಲವೆಂದರು. ಕೆಲರು ದಕ್ಷನ ದಾಕ್ಷಿಣ್ಯಕ್ಕೆ ಕಟ್ಟುಬಿದ್ದರು. ಆಗ ಈ ಗಡಿಬಿಡಿಯನ್ನು ನೋಡಿ **ಕಲಹಪ್ರಿಯನಾದ ನಾರದನು** ಎಲ್ಲರಿಗೂ ಧೈರ್ಯ ಹೇಳಿ, ಹಿಡಿದಕಾರ್ಯ ವನ್ನು ಬಿಡಬೇಡಿ, ಯಾಗವನ್ನು ನಡೆಯಿಸಿ, ಶಿವನ ಕೃಪೆಯಿದ್ದಂತಾಗಲಿ ಎಂದು ದಕ್ಷಾದಿಗಳಿಗೆ ಧೈರ್ಯಹೇಳಿ ಇತ್ತ ಕೈಲಾಸದಕಡೆಗೆ ಧಾವಿಸಿದನು. ೫೩

ಅನಂತರ ಮುಖ್ಯ ಮುನಿಗಳೆಲ್ಲಾ ಹೋದ ಮೇಲೆ ಯಜ್ಞವು ದಕ್ಷನ ಧೈರ್ಯದೊಂದಿಗೆ ಮುಂದುವರಿಯಿತು. ಆ ಯಾಗ ಶಾಲೆಯಲ್ಲಿ ವೈದಿಕರು ಘೋಷಿಸುತ್ತಿದ್ದ ಗಾಯತ್ರೀ ಮೊದಲಾದ ಮಂತ್ರ ಧ್ವನಿಯು ದಕ್ಷನ ಅವಜ್ಞತೆಯನ್ನು ಉದ್ಘೋಷಿಸುತ್ತಿವೆಯೋ ಎನ್ನುವಂತಿತ್ತು. ೫೪

ಆಮೇಲೆ ಪದ್ಧತಿಯಂತೆ ಯಾಗ ಶಾಲೆಯಲ್ಲಿ ಶಸ್ತ್ರವನ್ನು ಮಸೆ, ಯೂಪವನ್ನು ಪೂಜಿಸು, ಹಗ್ಗದಿಂದ ಮೇಕೆಯನ್ನು ಕಟ್ಟು, ಅದು ಕೂಗಿ ಕೊಳ್ಳದ ಹಾಗೆ ಅದರ ಗಂಟಲನ್ನು ಮುರಿದು ಮರ್ದಿಸು, ಬಳಿಕ ಅದನ್ನು

ವಿಧ್ಯುಕ್ತವಾಗಿ ಉಪಚರಿಸು, ಅಂಗಾಂಗಗಳನ್ನು ಪೂಜಿಸು, ಅಜಪಶುವನ್ನು ಕೊಯ್ಯಿ, ಅದರ ಪಲಲವನ್ನು ತೆಗೆ, ಅದರ ರಕ್ತವನ್ನು ಬಸಿ, ವಪೆಯನ್ನು ಸುಲಿ, ಬೆಂಕಿಯಲ್ಲಿ ಕಾಯಿಸು, ಆಹುತಿಯನ್ನು ಕೊಡು, ಮಿಕ್ಕ ಎಸರನ್ನು ಪುರೋಡಾಶಪ್ರಾಶನವನ್ನು ಮಾಡು ಎಂಬ ಮೊದಲಾದ ಗಡಿಬಿಡಿಯು ಹೊಲೆಗೇರಿಯಲ್ಲಿ ನಡೆಯುವಂತೆ ದಕ್ಷನ ಯಾಗ ಶಾಲೆಯಲ್ಲಿ ನಡೆಯುತ್ತಿರಲು ಇತ್ತ ನಾರದ ಮುನಿಯು ಕೈಲಾಸವನ್ನು ಬಂದು ಸೇರಿದನು. ೫೫

ನಾರದ ಮುನಿಯು ಕೈಲಾಸಕ್ಕೆ ಬಂದು ಆನಂದದಿಂದ ಅಘನಾಶನಾದ ಈಶನನ್ನು ವಂದಿಸಿ, ರಿಪುವೃಂದ ವಿಮೋಚನ ರಚನಾವಚನ ಪ್ರಚಯದಿಂದ ಕೀರ್ತಿಸಿ, ವಿನಯದಿಂದ ಪಕ್ಕಕ್ಕೆ ನಿಲ್ಲಲು, ಚಂದ್ರ ಚೂಡನಾದ ಶಂಕರನು ನಾರದನ ಕೈಂಕರ್ಯವನ್ನು ಕಂಡು, ದುಗುಡಾಂಬುಧಿ ಮಂದರ ಎಲ್ಲಿಹೋಗಿದ್ದೆ? ಹತ್ತಿರಬಾ. ವಿಶೇಷವೇನು? ಎಂದು ಪ್ರಶ್ನಿಸಲು ದಕ್ಷನ ಯಾಗಶಾಲೆಯೆಂಬ ಅರಣ್ಯಕ್ಕೆ ಕಾಳ್ಗಿಚ್ಚಿನಂತಿರುವ ಬೀಜರೂಪವಾದ ಮಾತುಗಳನ್ನು ಶಿವನಲ್ಲಿ ಬಿನ್ನೈಸಿದನು. ೫೬

ನಾರದ:— ಯಾಗ ದೀಕ್ಷಿತನಾಗಿರುವ ದಕ್ಷ ಬ್ರಹ್ಮನಲ್ಲಿಗೆ ಹೋಗಿದ್ದೆ.

ಶಿವ:— ಅದೇನು? ದಕ್ಷನು ಯಾಗವನ್ನೇಕೆ ಮಾಡುತ್ತಿರುವನು?

ನಾರದ:— ಅವನು ನಿಮ್ಮನ್ನು ನಿಂದಿಸಿ ಈಗಲೇ ಯಾಗವನ್ನು ಪ್ರಾರಂಭಿಸಿರುವನು.

ಶಿವ:— ಯಾಗಕ್ಕೆ ಎಲ್ಲರೂ ಬಂದರೆ? ಅವರಲ್ಲಿ ಎನಗಾಗಿ ಯಾರೂ ವಿರೋಧಿಸಲಿಲ್ಲವೆ?

ನಾರದ:— ಉಂಟು. ಶಿವಯೋಗೀಂದ್ರ ದಧೀಚಿ ವ್ರತಿ ಮಾತ್ರ ವಿರೋಧಿಸಿದನು. ೫೭

ಶಿವ:— ಥಟ್ಟನೆ ಹೇಳು. ನನ್ನ ಆ ಭಕ್ತನು ಅಲ್ಲೇನು ಮಾಡಿದನು?

ನಾರದ:— ಆ ದಧೀಚಿಯು ಮದಸೊಕ್ಕಿದ ಕರಿಯು ಕೊಳವನ್ನು ಹೊಕ್ಕಂತೆ ಯಾಗಶಾಲೆಯನ್ನು ಹೊಕ್ಕು, ಅಗ್ರಾಸನದಲ್ಲಿ ನಿಮ್ಮನ್ನು ಕಾಣದೆ, ಘುಡಿ ಘುಡಿಸುತ್ತ ಸಭೆಯಕಡೆಗೆ ತಿರುಗಿ, ವಿಷ್ಣು ಬ್ರಹ್ಮಾದಿ ದೇವತೆಗಳಿಗೆಲ್ಲ ಶಾಪವನ್ನು ಕೊಟ್ಟು, ಹೊರಟು ಹೋದನು. ಅವನ

ಹಿಂದೆಯೇ ವಿವೇಕಿಗಳಾದ ವಸಿಷ್ಠಾದಿ ಋಷಿಗಳೂ ಹೊರಟುಹೋದರು. ಮತ್ತುಳಿದವರು ಯಾಗವನ್ನು ನಡೆಸುತ್ತ ಇದ್ದಾರೆ ಎಂದು ಬಿನ್ನೈಸಿದನು. ೫೮

ಆಗ ಧಾಕ್ಷಾಯಣಿಯು ತಂದೆಯ ಯಾಗ ವಾರ್ತೆಯನ್ನು ಕೇಳಿ ಕುಪಿತಳಾಗಿ, ನಾನೀಗಲೇ ಹೋಗಿ ತಂದೆಯಾದ ದಕ್ಷನಿಗೆ ಬುದ್ಧಿಹೇಳಿ ಯಾಗವನ್ನು ನಿಲ್ಲಿಸುವೆನು. ಅಲ್ಲವಾದರೆ ಅದನ್ನು ಧ್ವಂಸ ಮಾಡುವೆನು. ಆದ್ದರಿಂದ ಪೂಜ್ಯ ಶಂಕರಾ, ನಾನು ತಂದೆಯ ಮನೆಗೆ ಹೋಗಿ ಬರಲು ಅಪ್ಪಣೆಯನ್ನು ಕೊಡು ಎಂದು ಶಿವನಿಗೆ ಬಿನ್ನೈಸಿದಳು. ಆಗ ಶಿವನು ಪ್ರಿಯಸತೀ, ಪಾಪಿಯಾದ ದಕ್ಷನು ನಿನ್ನ ಮಾತನ್ನು ಕೇಳನು. ಅಲ್ಲಿಗೆ ಹೋಗುವುದರಿಂದ ಕೇಡು ತಪ್ಪದು ಎಂದನು. ೫೯

ಆಗ ದಕ್ಷಪುತ್ರಿಯು ಎಲೈ ಶಂಕರನೇ ಪೂಜ್ಯನಾದ ನಿನಗೆ ವಿರೋಧಿಯಾದ ಆ ದಕ್ಷನು ನನಗೆ ತಂದೆಯೆಂತಾದಾನು ? ಅಂಥವನನ್ನು ತಂದೆಯೆಂದು ಭಾವಿಸಿದರೆ ಸತಿಯೆಂಬ ನಾಮವು ನನಗೆ ಸಾರ್ಥಕವಾದೀತೆ ? ಏನಾದರೂ ಆಗಲಿ, ನಾನು ತಂದೆಯ ಯಾಗ ಶಾಲೆಗೆಹೋಗಿ ಅವನಿಗೆ ಬುದ್ಧಿಯನ್ನು ಹೇಳುವೆನು. ಆದಂತಾಗಲಿ ಅಪ್ಪಣೆಯನ್ನು ಕೊಡು ಎಂದು ಶಿವನನ್ನು ಒಲಿಸಿ, ರುದ್ರಕನ್ನಿಕೆಯರೊಡನೆ ಪುಷ್ಪಕವನ್ನು ಹತ್ತಿ ದಕ್ಷನ ಯಾಗಶಾಲೆಗೆ ಅಭಿಮುಖಳಾದಳು. ೬೦

ಅನಂತರ ಶಿವನು ಕಳಿಸಿದ ವೈಗಾವಲು ಗಣಗಳೊಡನೆ ಪುಷ್ಪಕಾರೂಢಳಾಗಿ ಹಸನ್ಮುಖಿಯಾದ ದಾಕ್ಷಾಯಣಿಯು ಅತಿವೇಗದಿಂದ ಪ್ರಯಾಣ ಮಾಡಿ ಬಂದು ದಕ್ಷನ ಯಾಗಶಾಲೆಯನ್ನು ಸೇರಿದಳು. ೬೧

ತನ್ನ ಸುಪುತ್ರಿಯಾದ ದಾಕ್ಷಾಯಣಿಯು ಮುಂದೆ ಬಂದು ನಿಂತಿದ್ದರೂ ದಕ್ಷನು ಅವಳನ್ನು ನೋಡದೆ ಮುಖವನ್ನು ತಿರುಗಿಸಿಕೊಂಡನು. ಆಗ ಅವನ ಮುಖವು ಚಂದ್ರನಿಲ್ಲದ ರಾತ್ರಿಯಂತೆಯೂ, ಸೂರ್ಯನಿಲ್ಲದ ಆಕಾಶದಂತೆಯೂ ಕಾಂತಿ ಶೂನ್ಯವಾಗಿತ್ತು. ದಾಕ್ಷಾಯಣಿಯು ತಂದೆಯ ಈ ಸ್ಥಿತಿಯನ್ನು ನೋಡಿ, ಅವನಲ್ಲಿ ಮಾತಾಡುವ ತವಕದಿಂದ ಅವನು ಮುಖವನ್ನು ತಿರುಗಿಸಿದ ಕಡೆ ತಾನೂ ಹೋಗಿ ನಿಲ್ಲುತ್ತಿದ್ದಳು. ೬೨

ಇಷ್ಟಾದರೂ ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿರುವ ಶಿವನ ಕೀರ್ತಿಯನ್ನು ನೋಡಲಾರದೆ, ನಿಷ್ಠುರನಾದ ದಕ್ಷನು ಹೀಗೆ ಸುತ್ತಲೂ ತಲೆಯನ್ನು ತಿರುಗಿಸುತ್ತಿರುವುದನ್ನು ಕಂಡು, ಪಾರ್ವತಿಯು ಆ ಯಾಗ ಶಾಲೆಯಲ್ಲಿರುವ ವಿಷ್ಣು, ಇಂದ್ರ, ಅಗ್ನಿ, ವರುಣ, ಕುಬೇರ ಮೊದಲಾದ ದೇವ ಪ್ರಮುಖರನ್ನು ಕುರಿತು ಇನ್ನು ನಾನು ಈ ಪಾಪಿಯಾದ ದಕ್ಷನ ಸಂಬಂಧವಾದ ಶರೀರವನ್ನು ಧರಿಸಿರಲಾರೆನು ಎಂದು ಹೇಳಿದಳು. ೬೩

ಆಗ ದಕ್ಷನು ಪಾರ್ವತಿಯನ್ನು ಕುರಿತು, ಎಲೌ ನಿನ್ನನ್ನು ಇಲ್ಲಿಗೆ ಕರೆದವರಾರು ? ಮಾತನಾಡಿಸಿದವರಾರು ? ಇಲ್ಲಿ ಇರಲು ಅನುಮತಿ ಕೊಟ್ಟವರಾರು ? ತುಂಬಿದ ದೇವ ಸಭೆಯಲ್ಲಿ ದಕ್ಷಪಿತಾಮಹನಾದ ನನಗೆ ಅಪಮಾನ ಮಾಡಿದ ಆ ಮರುಳು ಶಂಕರನು ನನಗೆ ಅಳಿಯನೆಂತಾದಾನು ? ಅವನ ಅನುವರ್ತಿನಿಯಾದ ನೀನು ನನಗೆ ಮಗಳೆಂತಾದೀಯೆ ? ಇನ್ನು ನಿನ್ನ ಗಂಡನ ಸರ್ವೇಶತ್ವದ ಅವಧಿ ಮುಗಿಯಿತು. ಅವನನ್ನು ನಾಶಮಾಡದಿದ್ದ ಮೇಲೆ ನಾನು ದಕ್ಷನೆಂತಾದೇನು ? ಎಂದು ಗರ್ಜಿಸಿ ಮಾತನಾಡಿದನು. ೬೪

ಆಗ ದಾಕ್ಷಾಯಣಿಯು ತನ್ನ ಪತಿಯ ನಿಂದೆಯ ಮಾತುಗಳನ್ನು ಕೇಳಿ ಕುಪಿತಳಾಗಿ, ಕುರುಡನು ಕನ್ನಡಿಯನ್ನು ನೋಡದಿದ್ದರೆ ಕನ್ನಡಿಗೆ ಕಳಂಕವೇ ? ಹಾಗೆ ಸರ್ವಜ್ಞನಾದ ಶಂಕರನ ಮಹಿಮೆಯನ್ನು ನೀನು ಅರಿಯದಿದ್ದರೆ ಇದು ಆ ಮೃತ್ಯುಂಜಯನಿಗೆ ನ್ಯೂನತೆಯೇ ? ತಂದೆಯೇ ಎಂಥ ಅವಿವೇಕವಾದ ಮಾತನಾಡುತ್ತಿರುವೆ ? ಇದನ್ನು ನೋಡಿದರೆ ನಿನಗೆ ಕಡೆಗಾಲವು ಬಂದಂತೆ ತೋರುತ್ತದೆ. ಇದನ್ನು ಆಡುವ ನೀನೂ, ಲಾಲಿಸಿ ಸೈರಿಸಿದ ಈ ಸಭಿಕರೂ, ಶಿವ ಕೋಪದಿಂದ ನಾಶವಾಗತಕ್ಕವರೇ ಸರಿ ಎಂದು ಶಪಿಸಿದಳು. ಮೊದಲೇ ದಧೀಚಿಯ ಶಾಪದಿಂದ ದಗ್ಧರಾಗಿದ್ದ ಆ ದಕ್ಷಾದಿಗಳು ಈಗ ದಾಕ್ಷಾಯಣಿಯ ಶಾಪದಿಂದಲೂ ಹತರಾದರು. ಇದು ಸುಟ್ಟುದನ್ನು ಸುಟ್ಟಂತಾಯಿತು. ೬೫

ದಾಕ್ಷಾಯಣಿಯ ಈ ಶಾಪದ ಮಾತುಗಳನ್ನು ಕೇಳಿ ದಕ್ಷನಿಗೆ ಕೋಪವು ತಲೆಗೆ ಹತ್ತಿತು. ಆ ಕೋಪಾಟೋಪದಿಂದ ಅವನು ಮಿತಿಮೀರಿ

ದನು. ಆಗ ಸಭೆಯಲ್ಲಿದ್ದ ವಿಷ್ಣು, ಬ್ರಹ್ಮ, ಇಂದ್ರ ಮೊದಲಾದವರ ಮುಂದೆ ಶಿವನನ್ನು ಮನಬಂದಂತೆ ನಿಂದಿಸಿ ಪರಿಹಾಸ್ಯಮಾಡಿದನು. ಈ ಪರಿಸ್ಥಿತಿಯು ದಾಕ್ಷಾಯಣಿಗೆ ಮಿತಿಮೀರಿದ ಸಂತಾಪವನ್ನುಂಟುಮಾಡಿತು. ಅವಳು ಮನಸ್ಸಿನಲ್ಲಿ ಬಹಳವಾಗಿ ಘಡಿ ಘುಡಿಸಿದಳು. ೬೬

ಆಗ ಶಿವಪತ್ನಿಯು ಎಲೈ ದಕ್ಷಪಿತಾಮಹನೇ ನೀನು ಇದುವರೆಗೆ ಮಾಡಿದ ಅನಂತ ಅಪರಾಧಗಳನ್ನು ಕ್ಷಮಿಸಿದೆನು. ಪತಿಯಾದ ಶಿವನ ನಿಂದೆಯನ್ನು ನಾನು ಸೈರಿಸಲಾರೆನು. ಶಿವದ್ವೇಷಿಯಾದ ನಿನಗೆ ನಾನು ಮಗಳಾಗಲಾರೆನು. ಆದ್ದರಿಂದ ನಿನ್ನ ಸಂಬಂಧವಾದ ಶರೀರವನ್ನು ತ್ಯಜಿಸುವೆನು. ಈ ನಿನ್ನ ಶಿವ ದ್ವೇಷಕ್ಕೆ ತಕ್ಕ ಪ್ರಾಯಶ್ಚಿತ್ತವಾಗುವುದು; ಅದನ್ನು ನೀನು ಅನುಭವಿಸದೆ ಗತಿ ಯಿಲ್ಲ. ಎಂದು ಹೇಳಿ ತರುಣೇಂದು ಧರನ ಸತಿಯಾದ ದಾಕ್ಷಾಯಣಿಯು ಆತ್ಮಾಹುತಿಗೆ ಸಿದ್ಧಳಾದಳು. ೬೭

ಅನಂತರ ಪತಿವ್ರತೆಯರ ಮನೆದೈವವಾದ ಆ ಮಹಾತಾಯಿಯು ಭುಗಿಲ್‌ಭುಗಿಲ್‌ಎಂದು ವಿಜೃಂಭಿಸುತ್ತಿರುವ ಅಗ್ನಿಕುಂಡವನ್ನು ನಿಟ್ಟಿಸಿ ನೋಡಿ, ಬಿಸಿಯು ಮೂರುಲೋಕವನ್ನು ವ್ಯಾಪಿಸಲು, ಅಗ್ನಿಯು ನಡುಗಲು, ಅಂತಃಕುಂಡಲಿಯಲ್ಲಿ ಯೋಗಮಾರ್ಗದಿಂದ ಪ್ರಾಣವನ್ನು ನಿಲ್ಲಿಸಿ, ಉರಿಯು ಗಗನವನ್ನು ವ್ಯಾಪಿಸುತ್ತಿರುವಲ್ಲಿ, ಸಹಸ್ರ ರವಿಪ್ರಭೆ ಬೆಳಗುವಂತೆ ಸಭಿಕರೆಲ್ಲರ ಕಣ್ಣುಗಳಿಗೆ ತಮಂಧವು ಕವಿಯಲು ಅಗ್ನಿಮುಖದಿಂದ ಆಗಸಕ್ಕೆ ಹಾರಿದಳು. ೬೮

ಯಾಗಶಾಲೆಯಲ್ಲಿ ದಾಕ್ಷಾಯಣಿಯ ಈ ಪ್ರಚಂಡವಾದ ಆತ್ಮಾರ್ಪಣ ದಿಂದ ಎಲ್ಲರೂ ದಿಗ್ಭ್ರಾಂತರಾದರು. ಹಲವರು ಅಂಜಿ ಓಡಿದರು. ಇದನ್ನು ನೋಡಿ ದಕ್ಷನು ಎಲ್ಲರನ್ನೂ ಸಮಾಧಾನಮಾಡುತ್ತಾ, ಆ ದುರ್ದೈವಿಯ ಸಂಗ

ದಿಂದ ಬುದ್ಧಿಗೆಟ್ಟು ಆಕಸ್ಮಿಕವಾದ ಉರಿಗೆ ಈಡಾದವಳ ವಿಯೋಗಕ್ಕಾಗಿ ಅಂಜುವಿರೇಕೆ? ದಕ್ಷಪಿತಾಮಹನಾದ ನಾನು ಇರುವಾಗ ಯಾರ ಅಂಜಿಕೆಯೇನು? ಎಂದು ಸಭಿಕರಿಗೆ ಧೈರ್ಯಹೇಳಿದನು. ಆಗ ಯಾಗಶಾಲೆಯ ಜನ ದಿಗ್ಭ್ರಾಂತರಾಗಿ, ಶಿವದ್ರೋಹ ವಿಧಿಯು ನಮ್ಮನ್ನು ಇಲ್ಲಿಂದ ಹೋಗಗೊಡುವುದೆಂತು! ಎಂದು ನಿಟ್ಟುಸಿರು ಬಿಟ್ಟರು. ೬೯

ಇತ್ತ ದಕ್ಷಸಂಬಂಧವಾದ ದೇಹವನ್ನು ಅಗ್ನಿಮುಖದಿಂದ ನೀಗಿ ಜಗನ್ಮಾತೆಯು ಪುಟವಿಟ್ಟ ಚಿನ್ನದಂತೆ ಕೈಲಾಸಕ್ಕೆ ಬಂದು, ಮದನಾಂತಕನ ಪಾದಗಳ ಮೇಲೆ ಬಿದ್ದು, ಯಾಗಶಾಲೆಯಲ್ಲಿ ನಡೆದ ಪ್ರಸ್ತಾಪಗಳನ್ನು ತಿಳಿಸಿದಳು. ಅದನ್ನು ಕೇಳಿ ಶಿವನು ಪ್ರಳಯ ಭೈರವ ರೂಪವನ್ನು ಧರಿಸಿದನು. ಅದನ್ನು ಲೋಕದಲ್ಲಿ ಬಣ್ಣಿಸುವವರಾರು? ೭೦

——:o:——

# ವೀರೇಶ ಚರಿತೆ ಕಥಾಸಾರ

——:o:——

## ಎರಡನೆಯ ಸಂಧಿ

ಇಂದಿನ ಶಿವನ ಕೋಪವು ಕಾಮದಹನ ಕಾಲದ, ತ್ರಿಪುರ ವಿನಾಶದ, ಅಂಧಕಾಸುರ ಮರ್ದನದ, ಯಮ ದಹನದ, ಗರಳಾಸುರ ವಿಧ್ವಂಸನದ, ಕಾಲಗಳ ಕೋಪಕ್ಕಿಂತ ಎಷ್ಟೋ ಕೋಟಿ ಮಡಿ ಮಿಗಿಲಾದುದೆಂದು ಲೋಕವು ಭಾವಿಸುತ್ತಿರಲು, ಶಿವನ ಶರೀರದಲ್ಲಿ ಭಯಂಕರವಾದ ಕೋಪವು ವ್ಯಾಪಿಸಿ, ಅದು ಭೋಂಕನೆ ಅವನ ಹಣೆಗಣ್ಣಿನ ಮುಗ್ಗಿಚ್ಚಿನ ಹಗ್ಗಿಯ ಮೊಗರದಲ್ಲಿ ಥಳಥಳಿಸುತ್ತಿತ್ತು. ೧

ಪ್ರಳಯಕಾಲದ ಜ್ವಾಲೆಯ ಮುಚ್ಚುಳನ್ನು ತೆಗೆದಂತೆ ಶಿವನ ನಡುಗಣ್ಣೆವೆಯು ಘುಡಿ ಘುಡಿಸುತ್ತ ಒಡೆಯಲು, ಪ್ರಚಂಡವಾದ ಕಿಡಿಗಳು ಕೆದರುತ್ತ ದಳ್ಳುರಿ ಆಕಾಶವನ್ನು ತೀವುತ್ತ, ಬಿರುಬಿಸಿ ಲೋಕವನ್ನು ಕಾಯಿಸುತ್ತ ಇರಲು, ಅದರ ಫಲವಾಗಿ ಶಿವನ ಜಡೆಯಲ್ಲಿದ್ದ ಗಂಗೆಯ ಮಡುಕಾದು ಉಕ್ಕಿ ಎಸರಾಯಿತು. ತಲೆಯಲ್ಲಿದ್ದ ಚಂದ್ರನು ಬೆವರಿಳಿದು ಚುಯ್ಯನೆ ಶಬ್ದಮಾಡುವ ಸುಧಾಬಿಂದುವಿನಿಂದ ಕರಗಿಹೋದನು ಎಂಬಂತಿರಲು, ಶಿವನ ಫಾಲನೇತ್ರಜ್ವಾಲೆಯಿಂದ ವೀರಕುಲಾಧೀಶ್ವರನು ಕಾಣಿಸಿಕೊಂಡನು. ೨

ಘುಡು ಘುಡು, ಧಗ ಧಗ, ಛಿಟಿ, ಛಿಟಿ, ಥಳ ಥಳ, ಭೂರ್ಭುಗಿಲ್ ಎಂಬ ಅಬ್ಬರವು ಮೂರು ಲೋಕವನ್ನು ವ್ಯಾಪಿಸುತ್ತಿರಲು, ಜಯತು ಜಯತು ಎಂದು ಗಣಕುಲವು ಕೂಗುತ್ತಿರಲು, ಸಮುದ್ರಗಳು ಉಬ್ಬುತ್ತಿರಲು, ಗಿರಿಗಳು ನಡುಗುತ್ತಿರಲು, ಭೂಮಿಯು ಕಂಪಿಸುತ್ತಿರಲು, ಆಕಾಶವು ಅದುರಲು, ನಕ್ಷತ್ರಗಳು ಉದುರಲು, ಸೂರ್ಯ ಚಂದ್ರರು ತಿರ್ರನೆ ತಿರುಗಲು, ಯಾಗಶಾಲೆಯ ಜನರ ಎದೆ ಒಣಗುತ್ತಿರಲು, ಥಟ್ಟನೆ ಶಿವನ ಫಾಲನೇತ್ರದಿಂದ ಭಯಂಕರನಾದ ವೀರಭದ್ರನು ಲಂಘಿಸಿದನು. ೩

ಹೀಗೆ ಹಾರಿದ ಭಾರಕ್ಕೆ ಭೂಮಿಯು ಬಿರಿಯಿತು. ಆದಿಶೇಷನ ಹೆಡೆ ಮುರಿಯಿತು. ಕಮಠನ ಬೆನ್ನು ಪುಡಿಯಾಯಿತು. ಹೀಗಾಗಲು ಶಿವನ ಹಣೆಗಣ್ಣಿನಿಂದ ಜನ್ಮಿಸಿದ ಆ ವೀರಭದ್ರನು ತ್ರಿಲೋಕವನ್ನು ವ್ಯಾಪಿಸುವಷ್ಟು ವಿಸ್ತಾರನಾಗಿ ಮುಂದೆ ನಿಂತುದನ್ನು ಕಂಡು ಜನ್ಮದಾತನಾದ ಶಿವನೇ ಬೆರಗಾಗಿ ಹೋದನು.
೪

ಆಗ ಶಿವನು ಇದು ನನ್ನ ಶರೀರದಲ್ಲಿರುವ ಕೋಪವಲ್ಲವೇ ? ಹಣೆಗಣ್ಣಿನಿಂದ ಉದಿಸಿದ ಮೂರ್ತಿಯಲ್ಲವೇ ? ಇದೇಕೆ ಇವನಿಂತು ಉಗ್ರರೂಪವನ್ನು ಧರಿಸಿದನು ? ನನ್ನ ಅಪ್ಪಣೆಯಿಲ್ಲದೆ ಇವನಿಂತು ಕೋಪಿಸಲು ಕಾರಣವೇನು ? ಎಂದು ಬೆರಗಾಗಿ, ಎಲೈ ವೀರಶಿಶುವೆ ಸೈರಿಸು ಸೈರಿಸು. ಕೋಪವಬಿಡು. ನಿನ್ನ ಪರಾಕ್ರಮವನ್ನು ಬಡಲೋಕಗಳ ಮೇಲೆ ತೋರಿಸಬೇಡ. ಶಾಂತನಾಗು ಎಂದು ಹೇಳಲು, ಅಂತೆಯೇ ಆ ಉಗ್ರಮೂರ್ತಿಯು ಶಾಂತಮೂರ್ತಿಯಾಯಿತು.
೫

ಆ ಶಿವನ ಫಾಲನೇತ್ರದಿಂದ ಹುಟ್ಟಿದ ಆ ದಿವ್ಯಮೂರ್ತಿಯು ಬೆಂಕಿಯ ಮೈಬಣ್ಣದಿಂಬಲೂ,ನಿಡು ಜಡೆಮುಡಿಯಿಂದಲೂ, ನಡುನೆತ್ತಿಯ ಲಿಂಗದಿಂದಲೂ, ಮಕುಟ ಮಣಿಕುಂಡಲಾದಿ ಆಭರಣಗಳಿಂದಲೂ, ಪಂಚಮುಖಗಳಿಂದಲೂ, ಸಹಸ್ರ ಭುಜಗಳಿಂದಲೂ, ಉಡುಗೆಯ ಚಲ್ಲಣದಿಂದಲೂ ಅನಂತ ದಿವ್ಯಾಯುಧಗಳಿಂದಲೂ, ಉರಿಗಣ್ಣನ್ನು ಕೆದರುವ ನೋಟದಿಂದಲೂ ಪರಿಶೋಭಿಸುತ್ತಿತ್ತು. ಇಂತಹ ಆ ವೀರೇಶನ ನಿಲುವು ಯಾರನ್ನು ತಾನೆ ನಡುಗಿಸದು ?
೬

ಯಮನ ಓಲಗ ಶಾಲೆಯಿಂದ ಹೊರಡುವ ಬಂಟರೋ ? ಧನಂಜಯನ ಬತ್ತಳಿಕೆಯಿಂದ ಹೊರಡುವ ಕ್ರೂರವಾದ ಬಾಣಗಳೋ ? ವಿಷದ ಹುತ್ತದಿಂದ ಹೊರಡುವ ಕ್ರೂರವಾದ ಸರ್ಪಗಳ ಸಮೂಹವೋ ? ಎಂಬಂತಿರುವ ಅಸಂಖ್ಯಾತ ಭೂತಗಣವು ಆ ವೀರಭದ್ರನ ಸಂಕಲ್ಪ ಮಾತ್ರದಿಂದ ಹುಟ್ಟಿಬರುತ್ತಿತ್ತು. ಈ ಕಳಕಳ ಧ್ವನಿಯಿಂದ ಶಿವನ ಕಿವಿಯು ಕಿವುಡಾಗಿ ಹೋಗುವಂತಿತ್ತು.
೭

ಈಪ್ರಕಾರವಾದ ಸೂರ್ಯಚಂದ್ರರನ್ನು ಒಡವೆಗಳನ್ನಾಗಿಯುಳ್ಳ, ರಾಕ್ಷಸರತಲೆಗಳನ್ನು ಗೆಜ್ಜೆಯ ಸರವನ್ನಾಗಿಯುಳ್ಳ, ನೃತ್ಯ ರೂಪನಾದ ಹಲಗೆಯ ಕಡುಗಲಿ ಶಿವನ ಮುಂದೆ ಪರಿಶೋಭಿಸಿದನು. ೮

ಈ ವೀರಭದ್ರ ಮೂರ್ತಿಯು ಪ್ರಚಂಡವಾದ ಕಾಲಪುರುಷನ ಕೋಪದ ಬಂಟನು. ಪ್ರಳಯಕಾಲದ ಬೆಂಕಿಯಿಂದ ಕಾಯಿಸಿ, ರಾಹುಕೇತುಗಳೆಂಬ ಇಕ್ಕಳಿನ ಸಹಾಯದಿಂದ, ಅಂಧಕಾಸುರನ ಎದೆಗಲ್ಲಿನ ಮೇಲೆ, ವಜ್ರದ ಚಮ್ಮಟಿಗೆಯಿಂದ ಹೊಡೆದು, ಕ್ರೂರಸರ್ಪನ ವಿಷದ ನೀರನ್ನು ಉಣಿಸಿ, ಸೂರ್ಯಮಂಡಲದಲ್ಲಿ ಮಸೆದು, ಎಳೆಮಿಂಚಿನಲ್ಲಿ ಪುಟಗೊಟ್ಟು ಮಾಡಿದ ಉಗ್ರ ರೂಪಿನ ವಿಗ್ರಹವೋ ಎಂಬಂತೆ ಆವನು ಶೋಭಿಸಿದನು. ಅದನ್ನು ನಾನು ಏನೆಂದು ಬಣ್ಣಿಸಲಿ? ೯

ಆಗ ಶ್ರೀ ವೀರಭದ್ರನು ದಿಗ್ಗಜಗಳು ಕಂಪಿಸುತ್ತಿರಲು ತನ್ನ ಧೀರ ಪ್ರತಿಜ್ಞೆಯನ್ನು ಇಂತೆಂದು ನಿರೂಪಿಸಿದನು. ೧೦

ಎಲೈ ದೇವರ ಬಲ್ಲಹನಾದ ಶಂಕರನೇ ಅಪ್ಪಣೆಯನ್ನು ನಿರೂಪಿಸು. ಇಂದ್ರ, ಅಗ್ನಿ, ಯಮ, ವರುಣಾದಿಗಳ ತಲೆಗಳನ್ನು ಕಡಿದು ನಿನ್ನ ಪಾದ ಸನ್ನಿಧಿಗೆ ತಂದೊಪ್ಪಿಸಲೋ? ನಿನ್ನ ಅನುಗ್ರಹರೂಪವಾದ ನನ್ನ ಈ ಪರಾಕ್ರಮಕ್ಕೆ ಯಾವುದನ್ನು ಬಲಿಗೊಡಲಿ? ಹೇಳು ಎಂದು ಉಗ್ಘಡಿಸಿದನು. ೧೧

ಭೂಮಿಯನ್ನು ಬಗೆಯಲೋ? ಆದಿಶೇಷನನ್ನು ಕೊಲ್ಲಲೋ? ಸಮುದ್ರವನ್ನು ಕುಡಿಯಲೋ? ಬಡಬಾಗ್ನಿಯನ್ನು ಹಿಡಿಯಲೋ? ವಿಷ್ಣು ಬ್ರಹ್ಮಾದಿಗಳನ್ನು ಹೊಡೆಯಲೋ? ಕುಲಗಿರಿಗಳನ್ನು ಪುಡಿಮಾಡಲೋ? ಬ್ರಹ್ಮಾಂಡದ ಕೀಲುಗಳನ್ನು ಕಿತ್ತುಬಿಡಲೋ? ನಕ್ಷತ್ರಗಳನ್ನು ಪುಡಿಮಾಡಲೋ? ಶಿವನೇ ನನ್ನ ಕರ್ತವ್ಯವೇನೆಂಬುದನ್ನು ನನ್ನಾಣೆ ಹೇಳು ಎಂದು ವೀರಭದ್ರನು ವಿಜೃಂಭಿಸಿದನು. ೧೨

ಆಗ ಶಿವನು ಅವನನ್ನು ಸಮಾಧಾನಮಾಡಿ ಅಯ್ಯಾ ನಿನ್ನನ್ನು ದಕ್ಷಯಾಗದ ವಿನಾಶಕ್ಕಾಗಿ ಕಳಿಸಿಕೊಡುವೆನು. ವೇದವಿರೋಧಿಯಾದ, ಅಹಂ

ಕಾರ ರೂಪಿಯಾದ ಆ ದಕ್ಷನನ್ನೂ, ಅವನ ಅನುಯಾಯಿಗಳನ್ನೂ ಸದೆಬಡೆಯುವುದೇ ನಿನ್ನ ಅವತಾರದ ಮುಖ್ಯೋದ್ದೇಶ. ಆದ್ದರಿಂದ ಸಮಾಧಾನನಾಗು. ನಿನ್ನನ್ನು ತಕ್ಕ ಕಾರ್ಯಕ್ಕೆ ಕಳಿಸಿಕೊಡುವೆನು ಎಂದು ಶಿವನು ಹೇಳಿದನು. ೧೩

ಆಗ ವೀರನು ಅಪ್ಪಣೆಯನ್ನು ನಿರೀಕ್ಷಿಸುತ್ತಿರಲು ಸಪ್ತಸಮುದ್ರಗಳನ್ನು ಆಪೋಶನಮಾಡುವ ಸತ್ವಶಾಲಿಗಳಾದ ವಿಷ್ಣು ಬ್ರಹ್ಮೇಂದ್ರಾದಿ ಕಡುಗಲಿಗಳು ದಕ್ಷನ ಯಾಗದ ಸಂರಕ್ಷಣೆಗೆ ಕಂಕಣ ಕಟ್ಟಿದ್ದಾರೆ. ನೀನು ಹೋಗಿ ಶಿವದ್ರೋಹಿಯಾದ ದಕ್ಷನ ಯಾಗವನ್ನು ಧ್ವಂಸಮಾಡಿ, ಆ ವಿಷ್ಣು ಬ್ರಹ್ಮಾದಿಗಳನ್ನು ಕೊಲ್ಲದೆ, ನನ್ನೆಡೆಗೆ ಸೆಳೆದುಕೊಂಡು ಬಾ ಎಂದು ಹೇಳಿ ವೀರೇಶನನ್ನು ಪರಶಿವನು ಹರಸಿದನು. ೧೪

ಆಗ ವೀರಭದ್ರನು ಒಡೆಯರು, ಬೆಸಸಿದ ಕರುಣಕ್ಕೆ ಹಸಾದ ಎಂದನು. ಆದರೆ, ಆ ಮುಂದಿನ ತುಮುಲ ಯುದ್ಧದಲ್ಲಿ ಮಲೆತ ದೇವತೆಗಳನ್ನು, ನಮ್ಮ ಗಣಂಗಳು ಚಚ್ಚದೆ ಬಿಡುವರೆ ? ಶಂಕರಾ ಇದಕ್ಕೆ ಅಪ್ಪಣೆಯೇನು ಎಂದು ವೀರೇಶನು ಬಿನ್ನೈಸಿದನು. ೧೫

ಆಗ ಶಿವನು ಅಹಂಕರಿಸಿದವರನ್ನು ಕೊಲ್ಲು. ಶರಣೆಂದವರನ್ನು ಕಾಯಿ. ನಿನಗೆ ತಕ್ಕುದನ್ನು ಮಾಡು. ಎಲೈ ವೀರಭದ್ರಾ, ಒಟ್ಟಿನಲ್ಲಿ ಈ ದಕ್ಷಯಾಗ ವಿನಾಶ ಕಾರ್ಯದಲ್ಲಿ ವಿವೇಕದಿಂದ ವರ್ತಿಸು; ಎಂದು ಬುದ್ಧಿಹೇಳುವಾಗ, ಇದ್ದಕ್ಕಿದಂತೆಯೇ ಓರ್ವ ಆಕಸ್ಮಿಕ ಸತಿಯು ಆ ಶಿವನ ಸನ್ನಿಧಿಯಲ್ಲಿ ತಲೆ ದೋರಿದಳು. ೧೬

ಹಾಗೆ ತಲೆದೋರಿದ ಆ ಭದ್ರಾಣಿಯು ಮೂರುಉರಿಗಣ್ಣುಗಳಿಂದಲೂ, ನಂಜನ್ನು ಹೊರಸೂಸುವ ಮುಖಮುದ್ರೆಯಿಂದಲೂ, ದಶಾಯುಧಗಳಿಂದಲೂ, ಮಿಂಚನ್ನು ತಿರಸ್ಕರಿಸುವ ಅಲಂಕಾರಗಳಿಂದಲೂ ಪ್ರಾಣಗೊಂಡ ನೀಲಾದ್ರಿಯೋ ಎಂಬಂತೆ ಸಂಶೋಭಿಸಿದಳು. ೧೭

ಆಗ ಶಿವನು ಆ ವೀರಭದ್ರನಿಗೂ, ಭದ್ರಕಾಳಿಗೂ, ಮದುವೆಯನ್ನು ಮಾಡಿ ಅವರನ್ನು ಹರಸಿದನು. ಅವರೀರ್ವರೂ ಶಿವನ ಪಾದಕ್ಕೆ ಬಲ ಗೊಂಡು ಪ್ರಯಾಣ ಸಿದ್ಧರಾದರು. ೧೮

ಹೀಗೆ ವೀರಭದ್ರನು ದಕ್ಷಯಾಗ ವಿನಾಶಕ್ಕೆ ಶಿವನಿಂದ ಅಪ್ಪಣೆಯನ್ನು ಪಡಕೊಂಡು ಹೊರಟುವನ್ನು ಕಂಡು, ನಾರದನು ಕುಣಿದನು. ಮರುಳುಗಳು ನಲಿದುವು. ಶಾಕಿನಿ, ಧಾಕಿನಿಯರು ಹಿಗ್ಗಿದರು. ಮೃತ್ಯುಸತಿ ನಲಿದಳು. ಯಮನು ತನ್ನ ಪಟ್ಟಣದ ದಾರಿಯನ್ನು ಸರಿಪಡಿಸಿದನು. ಯಾಗಮಂಟಪ ದಲ್ಲಿ ಅನಂತ ಅಪಶಕುನಗಳಾದುವು. ೧೯

ವೀರಭದ್ರನು ಕೈನೀಸಿ ಭುಜವನ್ನು ತಟ್ಟಿಕರೆದ ಕೂಡಲೇ ಅಸಂ ಖ್ಯಾತ ಭೂತಗಣಗಳು ಅವನ ಹಿಂದೆ ಹೊರಟವು. ಆ ಅಪಾರವಾದ ಸೈನ್ಯ ಭಾರಕ್ಕೆ ಭೂಮಿ ಕಂಪಿಸಿತು. ಬೆಟ್ಟಗಳು ಪುಡಿಯಾದುವು. ಅಂದಮೇಲೆ ಅದನ್ನು ಬಣ್ಣಿಸುವುದಾದರೂ ಎಂತು? ೨೦

ಆ ವೀರಭದ್ರನ ಸೈನ್ಯವು, ಕುಲಗಿರಿಗಳನ್ನು ಕೈಗುಂಡುಗಳನ್ನಾಗಿ ಮಾಡಿ ಕೊಂಡು, ಬ್ರಹ್ಮಾಂಡಗಳನ್ನು ಚಂಡುಗಳನ್ನಾಗಿ ಮಾಡಿಕೊಂಡು, ದಿಗ್ಗಜಗಳ ದಂತ, ಯಮನ ಕೋಣನಕೋಡು ಇವುಗಳಿಂದಾದ ಬಡಿಗೆಗ ಳನ್ನು ಹಿಡಿದುಕೊಂಡು, ಸೂರ್ಯಚಂದ್ರರನ್ನು ತಾಳಗಳನ್ನಾಗಿ ಮಾಡಿ ಕೊಂಡು ವೀರೇಶನ ಅಕ್ಕಪಕ್ಕದಲ್ಲಿ ಬರುತ್ತಿತ್ತು. ೨೧

ಆ ವೀರ ಸೈನಿಕರು ಹಿಡಿದ ಕೊಡೆಗಳು, ಸೂರ್ಯಚಂದ್ರರ ಪ್ರಕಾಶವನ್ನು ಮುಚ್ಚಿ ಜಗತ್ತನ್ನು ಅಂಧಕಾರಮಯವಾಗಿ ಮಾಡಿದುವು. ಆದರೆ, ಆ ಪಟು ಭಟರ ಕೈಗತ್ತಿಗಳ ಪ್ರಕಾಶವು ಲೋಕಕ್ಕೆ ಬೆಳಕನ್ನುಂಟುಮಾಡಿತು; ಎಂಬಂತೆ ಆ ಶಿವಗಣಂಗಳ ಸೈನ್ಯವು ಕಣ್ಣಿಗೆ ಶೋಭಿಸಿತು. ೨೨

ದಾರಿಯಲ್ಲಿ ವಂದಿಮಾಗಧರು ದಾರಿಯನ್ನು ಬಿಡಿ ಬಿಡಿ, ಹರನ ಉರಿಗ ಣ್ಣಿನ ಮಗ ಬರುತ್ತಿದ್ದಾನೆ. ತೊಲಗಿ ತೊಲಗಿ ಶಿವದೂಷಕಗಜಸಿಂಹನು ಬರುತ್ತಿದ್ದಾನೆ. ಎಂದು ಉದ್ಘೋಷಿಸುತ್ತಿರಲು ಸೇನಾ ಸಂಭ್ರಮದಿಂದ ಗಣಂ ಗಳ ಸೈನ್ಯವು ದಕ್ಷನ ಯಾಗಶಾಲೆಯ ಕಡೆಗೆ ಧಾವಿಸಿ ಬರುತ್ತಿತ್ತು. ೨೩

ಈ ಪ್ರಸಂಗದಲ್ಲಿ ಕಲಹಾಶನನಾದ ನಾರದನು ಒಂದು ಹಂಚಿಕೆಯನ್ನು ಚಿಂತಿಸಿದನು. ಏನೆಂದರೆ ಈ ಗಣಗಳು ಒಂದೇ ಬಾರಿ ಯಾಗಶಾಲೆಯ ಮೇಲೆ ಬಿದ್ದು ದೇವತೆಗಳನ್ನು ಕೊಂದು ಹಾಕಿದರೆ, ತುಮುಲ ಯುದ್ಧ ನಡೆದಂತಾಗುವುದಿಲ್ಲ. ಅದರಿಂದ ನನ್ನ ಕಣ್ಣಿನ ಹಬ್ಬ ತೀರಿದಂತಾಗುವುದಿಲ್ಲ. ಅದು ಕಾರಣ ನಾನು ಮೊದಲೇ ದಕ್ಷನಿಗೆ ಈ ವಾರ್ತೆಯನ್ನು ತಿಳಿಸಿ ಅವನನ್ನು ಯುದ್ಧಕ್ಕೆ ಪ್ರೋತ್ಸಾಹಿಸಬೇಕು ಎಂದು ನಿಶ್ಚೈಸಿದನು. ಅಂತೆಯೇ ಓಡಿ ಬಂದು ಯಾಗಶಾಲೆಗೆ, ಎಲೋ ಮೂರ್ಖನಾದ ದಕ್ಷನೇ ಈ ಮಣ್ಣಿನ ಯಾಗವನ್ನು ಯಾಕೆ ಕೈಕೊಂಡೆ? ಯುದ್ಧಕ್ಕೆ ಸಿದ್ಧನಾಗು. ಪ್ರಬಲನಾದ ಶತ್ರು ಯುದ್ಧಕ್ಕೆ ಬರುತ್ತಿದ್ದಾನೆ ಎಂದು ಹೇಳಿದನು. ೨೪

ಆಗ ನಾರದನ ಮಾತನ್ನು ಕೇಳಿ ದಕ್ಷ ಪಿತಾಮಹನು, ದೇವತೆಗಳನ್ನು ಕುರಿತು ರಾತ್ರಿ ಮುಳಿದು ಸೂರ್ಯನನ್ನು ನೋಡುವುದಾದರೂ ಏನು? ಅಂತೆಯೇ ಆ ಬಡಶಿವಗಣಗಳು ಬಂದು ನಮ್ಮ ಪ್ರಚಂಡವಾದ ದೇವತೆಗಳ ಸೇನೆಯನ್ನು ಜಯಿಸುವುದಾದರೂ ಎಂತು? ಎಂದು ಗಹಗಹಿಸಿ ಸೊಕ್ಕಿನಿಂದ ಮಾತನಾಡಿದನು. ೨೫

ವೀರಭದ್ರನ ಆಗಮನ ವಾರ್ತೆಯನ್ನು ಕೇಳಿ ವಿಷ್ಣು ಬಹ್ಮದೇವೇಂದ್ರಾದಿಗಳೇ ಏಳಿರಿ ಯುದ್ಧಕ್ಕೆ ಸಿದ್ಧರಾಗಿರಿ. ಆ ಬಡಶಿವನ ಬಲವೆಷ್ಟೆಂಬುನನ್ನು ನಾನು ಬಲ್ಲೆ! ಅವರ ಹಣೆಯಕ್ಕರವನ್ನು ಒರಸಿಬಿಡುತ್ತೇನೆ. ಎಂದು ಹೇಳುತ್ತ ತೊಡೆಯನ್ನು ತಟ್ಟಿ, ತನ್ನ ಸೈನಿಕರು ಸಿದ್ಧರಾಗಲು ಯುದ್ಧದ ತಂಗುರವನ್ನು ಹೊಡೆಸಿದನು. ೨೬

ಅತ್ತ ವೀರಭದ್ರನ ಸೈನ್ಯವು ಅತ್ಯಂತ ಲಗುಬಗೆಯಿಂದಲೂ, ವೀರಾವೇಶದಿಂದಲೂ ಮುಂದೆನುಗ್ಗಿ ಬರುತ್ತಿತ್ತು. ೨೭

ಎರಡು ಪಕ್ಷಗಳಲ್ಲಿಯೂ ಆನೆ, ಕುದುರೆ, ರಥ, ಪದಾತಿ ಮೊದಲಾದ ಚತುರಂಗ ಬಲಗಳು ಕಾಳಗಕ್ಕೆ ಸಿದ್ಧವಾದುವು. ೨೮

ವೀರಭದ್ರನ ಸೈನ್ಯದಲ್ಲಿ ವಾಯುವೇಗಕ್ಕಿಂತಲೂ ಇಮ್ಮಡಿ, ಮುಮ್ಮಡಿ, ನಾಲ್ಮಡಿ, ಐಮಡಿ ವೇಗವುಳ್ಳ ಕುದುರೆಗಳ ಸೈನ್ಯವು ಪುಂಖಾನು ಪುಂಖವಾಗಿ ಬರುತ್ತಿತ್ತು. ೨೯

ಇತ್ತ ದಕ್ಷನ ಸೈನ್ಯಕ್ಕೆ ಮುಖಂಡರಾಗಿ ವಿಷ್ಣು ಬ್ರಹ್ಮೇಂದ್ರಾದಿ ಅತಿರಥ ಮಹಾರಥರು ಶಸ್ತ್ರಸಜ್ಜಿತರಾಗಿ ಯುದ್ಧಕ್ಕೆ ಸಿದ್ಧರಾದರು. ೩೦

ಆ ಯುದ್ಧ ಭೂಮಿಯಲ್ಲಿ ಗದೆಗಸ, ಕತ್ತಿ, ಕೊಂತ, ಗಂಡಸಿ, ನಖ, ಚಕ್ರ, ಪರಶು, ಫಳಕ, ಕುಠಾರ, ಬಡಿಗೆ, ಖೇಟಗ, ಕೈಗಲ್ ಮೊದಲಾದ ಬಗೆ ಬಗೆಯ ಆಯುಧಗಳನ್ನು ಹಿಡಿದು, ವೀರರಾದ ದೇವತೆಗಳು ಸಿಂಹನಾದ ಮಾಡಿದರು. ೩೧

ಆಗ ವಿಷ್ಣು ಬ್ರಹ್ಮಾದಿಗಳು ವ್ಯೂಹರಚನೆಯೇ ಮೊದಲಾದುವುಗಳಿಂದ ತಮ್ಮ ಸೈನ್ಯ ಬಲವನ್ನು ಹೆಚ್ಚಿಸುತ್ತಿದ್ದರು. ೩೨

ಈ ಪ್ರಕಾರ ಯುದ್ಧಕ್ಕೆ ಸಿದ್ಧವಾಗಿರುವ ದೇವತೆಗಳ ಸೈನ್ಯವು ಬಿರುಗಾಳಿಯ ಮುಂದಣ ಮೇಘಾವಳಿಯಂತೆ ತೋರಿಬರುತ್ತಿತ್ತು. ೩೩

ಅತ್ತ ಸೂರ್ಯೋದಯದಿಂದ ಕತ್ತಲೆಯು ದಿಕ್ಕೆಡುವಂತೆ ವೀರಭದ್ರನ ಸೈನ್ಯವು ದೇವತೆಗಳಿಗೆ ಎದುರಾದ ಕೂಡಲೇ ಊಹಾತೀತವಾದ ಆ ಸೈನ್ಯರಾಶಿಯನ್ನು ಕಂಡು ದೇವ ಪ್ರಮುಖರ ಎದೆ ಬಿರಿದು ಹೋಯಿತು. ೩೪

ಯುದ್ಧವು ಮೊದಲಾದ ಕೂಡಲೇ ವಿಷ್ಣುವು ಸಿಂಹವನ್ನು ಕಂಡ ಆನೆಯಂತೆ ವೀರಭದ್ರನನ್ನು ಕಂಡು ಘಾಬರಿಯಾಗಿ, ತನ್ನ ಚಕ್ರವನ್ನು ಬ್ರಹ್ಮನ ತಲೆಗಿಟ್ಟನು. ಇಂದ್ರನು ವರುಣನನ್ನು ಹೊಡೆದನು. ವರುಣನು ಕುಬೇರನ ಮೇಲೆ ಬಿದ್ದನು. ಹೀಗೆ ಶಿವನ ಮಾಯೆಯಿಂದ ದೇವತೆಗಳು ತಮ್ಮ ತಮ್ಮಲ್ಲಿಯೇ ಹೊಡೆದಾಡಿ ಯುದ್ಧದಲ್ಲಿ ಪರಾಜಿತರಾಗಿ ಓಡಲಾರಂಭಿಸಿದರು. ೩೫

ಶ್ರೀ ವಿಷ್ಣುವಿನ ಪ್ರಕಾಶಮಾನವಾದ ಚಕ್ರವನ್ನು ಗಣಗಳು ಪತಂಗದ ಹುಳುವಿನಂತೆ ಹಿಡಿದು ನೆಲಕ್ಕಪ್ಪಳಿಸಿದರು. ೩೬

ಯುದ್ಧಾತುರರಾದ ದೇವಪ್ರಮುಖರ ದಿವ್ಯಾಸ್ತ್ರಗಳನ್ನು ಭೂತಗಣಗಳು ಆ ವೇಶದಿಂದಕಿತ್ತು ಬಿಸಾಡುತ್ತಿದ್ದುವು. ೩೭

ಈ ಪ್ರಕಾರ ದೇವತೆಗಳು ವಿಜಯದ ಆಶೆಯನ್ನು ತೊರೆದು ಅಂಜಿ ಓಡಲಾರಂಭಿಸಿದರು. ೩೮

ಆಗ ವಿಷ್ಣುವು ಎರಳೆಯ ರೂಪವನ್ನು ಧರಿಸಿ ಓಡಿದನು. ೩೯

ಆಕ್ಷಣ ವೀರಭದ್ರನು ಜಿಂಕೆಯ ರೂಪದ ವಿಷ್ಣುವಿನ ಮೇಲೆ ಕ್ರೂರವಾದ ಬಾಣವನ್ನು ಹೊಡೆದನು. ಆ ಬಾಣವು ಜಿಂಕೆಯನ್ನು ಕೊಂದಿತು. ವಿಷ್ಣುವಿನ ಈ ಪರಿಸ್ಥಿತಿಯನ್ನು ಕಂಡು ವೀರಭದ್ರನು ನಸುನಕ್ಕನು. ೪೦

ಆಗ ಗಣಂಗಳು ಜಯರಿಪು ಕೋಲಾಹಲ. ಜಯ ಭವ ಭಾಳಾಂಬಕ ಎಂದು ಮೊದಲಾಗಿ ವೀರಭದ್ರನನ್ನು ಸ್ತುತಿಸಿದರು. ೪೧

ಆಗ ಎಲ್ಲ ವಿಧದಿಂದಲೂ ಪರಾಜಿತನಾದ ವಿಷ್ಣುವು ತನ್ನ ನಿಜರೂಪನ್ನು ಧರಿಸಿ ವೀರಭದ್ರನನ್ನು ಮರೆಹೊಕ್ಕನು. ೪೨

ಆಗ ನಾಕದ ನಾಣಿಲಿಗಳಾದ ಶಕ್ರಾದಿಗಳ ಅಭಿಮಾನವನ್ನು ಭಂಗಪಡಿಸಿ ಯಾಗಶಾಲೆಯ ಕಡೆ ಗೆ ವೀರೇಶನು ತಿರುಗಿದನು. ೪೩

ಆಗ ಒಬ್ಬ ದೂತನು ಓಡಿಬಂದು ದಕ್ಷನನ್ನು ಕುರಿತು,ಎಲೈ ದಕ್ಷಾ, ವಿಷ್ಣುಬ್ರಹ್ಮಾದಿಗಳೂ, ದೇವ ಪ್ರಮುಖರೂ ಹತರಾದರು. ವೀರೇಶನು ಯಾಗಶಾಲೆಯ ಕಡೆಗೆ ಬರುತ್ತಿರುವನು. ಯುದ್ಧಕ್ಕೆ ಸಿದ್ಧನಾಗು. ಎಂದನು. ಆಗ ಮೂರ್ಖನಾದ ದಕ್ಷನು ಹೂಂ! ಸತ್ತವರು ಸಾಯಲಿ. ಹೋಮ ನಡೆಯಲಿ, ಗಣಗಳು ಇಲ್ಲಿಗೆ ಬಂದರೆ ನಾನು ಕೈದೋರುವೆನು ಎಂದನು. ೪೪

ಅಷ್ಟು ಹೊತ್ತಿಗೆ ವೀರಭದ್ರನ ಸೈನಿಕರು ಬಂದು ಯಜ್ಞಶಾಲೆಯ ಮೇಲೆ ಉಗ್ರವಾಗಿ ಲಗ್ಗೆ ಮಾಡಿದರು. ೪೫

ಅನಂತರ ಕಡುಗಲಿಯಾದ ವೀರೇಶನು ಘುಡಿಘುಡಿಸುತ್ತ ಬಂದು ಯಜ್ಞದೀಕ್ಷಿತನಾಗಿ ಕುಳಿತಿರುವ ದಕ್ಷನ ತಲೆಯನ್ನು ಹಿಡಿದು, ಕೈಖಡ್ಗದಿಂದ ಕತ್ತರಿಸಿ ಶಿವದ್ರೋಹಿಯಾದ ನಿನಗೆ ಇದು ತಕ್ಕ ಪ್ರಾಯಶ್ಚಿತ್ತವೆಂದು ಅವನ

ತಲೆಯನ್ನು ಅಗ್ನಿ ಕುಂಡದಲ್ಲಿ ಹಾಕಿ ಸುಟ್ಟುಬಿಟ್ಟನು. ಅಲ್ಲದೆ ಆ ದಕ್ಷ ಯಾಗಕ್ಕೆ ಸಹಾಯಕನಾದ ಅಗ್ನಿಯನ್ನೂ ಶಿಕ್ಷಿಸಿದನು. ೪೬

ವೀರಭದ್ರನ ಕಿಂಕರರು ವಾಣಿಯ ಕಿವಿಯನ್ನು ಕುಯ್ದರು. ಮುನಿಗಳ ಮಿಾಸೆಗಳಿಗೆ ಉರಿಹಚ್ಚಿದರು. ದೇವಸ್ತ್ರೀಯರನ್ನು ಸೆರೆ ಹಿಡಿದರು. ದಕ್ಷನ ಮುಂಡವನ್ನು ಒದ್ದಾಡಿದರು. ಯಾಗಶಾಲೆಯನ್ನು ಧ್ವಂಸಮಾಡಿದರು. ೪೭

ಆಗ ದಕ್ಷ ಪತ್ನಿಯ ಕೋರಿಕೆಯಂತೆ,ವೀರಭದ್ರನು ಯಾಗಶಾಲೆಯಲ್ಲಿದ್ದ ಅಜಪಶುವಿನ ತಲೆಯನ್ನು ಕತ್ತರಿಸಿ,ದಕ್ಷನ ಮುಂಡಕ್ಕೆ ಕೂಡಿಸಿ ಅವನಿಗೆ ಜೀವ ದಾನ ಕೊಟ್ಟನು. ೪೮

ಮುನಿಗಳನ್ನೂ, ದೇವಪ್ರಮುಖರನ್ನೂ, ವಿಷ್ಣು ಬ್ರಹ್ಮಾದಿಗಳನ್ನೂ ಗಣಂಗಳು ಸೆರೆಹಿಡಿದರು. ೪೯

ಆಗ ವಿಜಯೋನ್ಮತ್ತರಾದ ಗಣಂಗಳೊಡನೆ ವೀರಭದ್ರನು ಕೈಲಾಸದ ಕಡೆಗೆ ಸೆರೆಸಿಕ್ಕಿದ ದಕ್ಷಾದಿಗಳು ಸಹಿತ ಅಭಿಮುಖನಾದನು. ೫೦

ಆಗ ಮಾರ್ಗಮಧ್ಯೆ ಹರಸುವ ಮಾರಿ, ಮಸಣಿ, ಶಾಕಿನಿ, ಢಾಕಿನಿ, ಭೇತಾಳ ಮೊದಲಾದ ಮರುಳುಗಳನ್ನು ಕಂಡು ನಗುತ್ತ ವೀರಭದ್ರನು ಮುಂದೆ ನಡೆದನು. ೫೧

ಮಾರ್ಗ ಮಧ್ಯದಲ್ಲಿ ಸ್ತ್ರೀಯರು ಕುರಿದಲೆಯ ದಕ್ಷನನ್ನು ಕಂಡು ಅಣಕಿಸುತ್ತ ವೀರೇಶನನ್ನು ಹರಸುತ್ತಿದ್ದರು. ೫೨

ಆಗ ಪಟುಭಟರು ವೀರಭದ್ರನ ಗುಣಗಾನಮಾಡುತ್ತಿದ್ದರು. ವಿಜಯ ಸೂಚಕವಾದ ಕಹಳಾಧ್ವನಿಯಾಯಿತು. ಆಗ ವೀರಭದ್ರನು ಕೈಲಾಸದ ಅರಮನೆಯನ್ನು ಹೊಕ್ಕನು. ೫೩

ವೀರಭದ್ರನು ವಿಷ್ಣು ಬ್ರಹ್ಮಾದಿಗಳನ್ನು ಹೊರಗೆಬಿಟ್ಟು, ಒಳಗೆ ಹೋಗಿ ಶಿವನ ಪಾದಗಳನ್ನು ಅಪ್ಪಿ ಎಲ್ಲ ಸಂಗತಿಗಳನ್ನೂ ತಿಳಿದನು. ೫೪

ಇದು ದಕ್ಷನ ಕಿರೀಟ, ಇದು ಕಾಲನ ತೋಳು. ಇದು ಇಂದ್ರನ ಕಣ್ಣು. ಇದು ಆದಿತ್ಯನ ಹಲ್ಲು. ಇದು ವಾಣಿಯ ಮೂಗು. ಇದು ಗದೆ, ಇದು ಚಕ್ರ, ಇವು ಇಂದ್ರಾದಿಗಳ ಶಸ್ತ್ರಾಸ್ತ್ರಗಳು ಎಂದು ಗಣಂಗಳು ಶಿವನ ಪಾದಕ್ಕೆ ದಿಗ್ವಿಜಯದ ಕಾಣಿಕೆಯನ್ನು ಒಪ್ಪಿಸಿದರು. ೫೫

ಆಗ ದಕ್ಷನು ಹಿಂದೆ ನಾನು ಅಜ್ಞಾನದಿಂದ ನಿನ್ನನ್ನು ನಿಂದಿಸಿದ್ದರಿಂದ ಇಂದು ನನಗೆ ಕುರಿಮೊಗವಾಯ್ತು. ಎಲೈ ಶಂಕರಾ ನನ್ನ ಅಪರಾಧವನ್ನು ಕ್ಷಮಿಸು, ನಾನು ಪಶು, ನೀನು ಪಶುಪತಿ. ಆದ್ದರಿಂದ ನೀನು ನನ್ನನ್ನು ರಕ್ಷಿಸಿ ಕಾಪಾಡು; ಎಂದು ದೈನ್ಯದಿಂದ ಬೇಡಿಕೊಂಡನು. ಆಗ ಶಿವನು ಅವನನ್ನು ಕ್ಷಮಿಸಿ ಅವನಿಗೆ ಶತಯಜ್ಞದ ಫಲವನ್ನು ಅನುಗ್ರಹಿಸಿ ಕಾಪಾಡಿದನು. ೫೬

ಅನಂತರ ಕರುಣಾಕರನಾದ ಶಂಕರನು ಎಲ್ಲ ದೇವತೆಗಳಿಗೂ ಪ್ರಾಣದಾನ ಮಾಡಿದನು. ಅಪರಾಧಿಗಳಾದ ವಿಷ್ಣು ಬ್ರಹ್ಮಾದಿಗಳನ್ನೆಲ್ಲ ಕ್ಷಮಿಸಿ, ಇನ್ನು ಮುಂದೆಹೀಗೆ ಅಶಾಸ್ತ್ರೀಯ ಮಾರ್ಗಗಳಲ್ಲಿ ವರ್ತಿಸದಂತೆ ಬುದ್ಧಿ ಹೇಳಿ, ಅವರಿಗೆ ತನ್ನ ಅಪರಾವತಾರ ಮೂರ್ತಿಯಾದ ವೀರಭದ್ರನ ಮಹಿಮೆಯನ್ನು ತಿಳಿಸಿ, ಅನುಗ್ರಹಿಸಿ ಅವರವರ ಲೋಕಗಳಿಗೆ ಕಳಿಸಿದನು. ಈ ಬಗೆಯಿಂದ ಹಂಪೆಯ ರಾಯನಭಕ್ತ ಕವಿರಾಯ ಹರಿಹರನ ವರಸುತನಾದ ರಾಘವ ದೇವನು ಹೇಳಿದ ವೀರೇಶ ಚರಿತೆಯೆಂಬ ಬಿನ್ನಪವನು ಲೋಕದ ಸದ್ಭಕ್ತರು ಲಾಲಿಸಲಿ.

—: ಮುಗಿದುದು :—

# ಅನುಬಂಧ ೧.

—:o:—

## ವಿಶೇಷ ವಿಚಾರಗಳು

೧ ವೀರಭದ್ರ:- ಇವನು ಕೈಲಾಸದ ಗಣದೇವತೆಗಳಲ್ಲಿ ಬಹಳ ಮುಖ್ಯನಾದವನು. ಶಿವನ ಮೂರುಮಂದಿ ಪುತ್ರರಲ್ಲಿ (ಗಣಪತಿ, ಕುಮಾರ, ವೀರಭದ್ರ) ಪರಿಗಣಿತನಾಗಿದ್ದಾನೆ. ವೀರಭದ್ರನ ಅವತಾರವು ಶಿವನ ಪಂಚವಿಂಶತಿ ಲೀಲೆಗಳಲ್ಲಿ ಹನ್ನೆರಡನೆಯ ಲೀಲೆಯೆಂದು ಶಿವಾಗಮನಗಳಲ್ಲಿಯೂ, ಶಿವಪುರಾಣಗಳಲ್ಲಿಯೂ, ಹೇಳಿದೆ. ದಕ್ಷಯಾಗವನ್ನು ನಾಶಮಾಡುವ ಸಲುವಾಗಿ ಶಿವನ ಹಣೆಗಣ್ಣಿನಿಂದ ಇವನು ಜನ್ಮಿಸಿದನೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಮತ್ತೆ ಕೆಲವು ಗ್ರಂಥಗಳಲ್ಲಿ ಶಿವನು ಸತೀವಿಯೋಗದಿಂದುಂಟಾದ ಕೋಪದಿಂದ ತನ್ನ ಜಡೆಯನ್ನು ಕೈಲಾಸದ ಶಿಖರಕ್ಕೆ ಅಪ್ಪಳಿಸಲು ಅದರಿಂದ ವೀರಭದ್ರನು ಜನ್ಮಿಸಿದನೆಂದು ಹೇಳಿದೆ.

ವೇದಪ್ರಾಚೀನ ಶೈವ ಧರ್ಮದಲ್ಲಿ ವೀರಭದ್ರನು ಒಂದು ಮುಖ್ಯ ವ್ಯಕ್ತಿಯಾಗಿದ್ದಾನೆ. ಶೈವ ಧರ್ಮದ ಅಂಗವಾದ ವೀರಶೈವ ಧರ್ಮದಲ್ಲಿ ವೀರಭದ್ರನಿಗೆ ಅಗ್ರಸ್ಥಾನವಿದೆ. ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಸಿದ್ಧವಾದ ಹಲವು ವೀರಭದ್ರ ದೇವಾಲಯಗಳಿವೆ. ಶ್ರೀ ಶೈಲದ ನಾಗಲೂಟ, ಕುಂಭಕೋಣಂ ಪೆರಿಯ ಮಠಂ, ಕಂಚಿಯ ಕಲ್ಲುಮಠ, ಮೈಸೂರು ಜಿಲ್ಲೆಯ ನಾಗಮಂಗಲ, ರಾಚೋಟಿ ವೀರಭದ್ರ, ಕಡೂರು ಜಿಲ್ಲೆಯ ಬೀರೂರು ವೀರಭದ್ರ, ಬೆಂಗಳೂರಿನ ಪ್ರಳಯಕಾಲ ವೀರಭದ್ರ, ಓರುಂಗಲ್ಲಿನ ವೀರಭದ್ರ, ದೇವರು, ಮಂಗಳೂರು ಜಿಲ್ಲೆಯ ಕಾರ್ಕಳದ ವೀರಭದ್ರ, ಕೆಳದಿಯ ವೀರಭದ್ರ ದೇವರು ಮೊದಲಾದವುಗಳನ್ನು ನಾವು ಉದಹರಿಸಬಹುದು. ಹಂಪೆಯಲ್ಲಿರುವ ಉದ್ದಾನ ವೀರಭದ್ರ, ತುಮಕೂರು ಸಮೀಪದ ನಿಜಗಲ್ಲು ಬೆಟ್ಟದಲ್ಲಿರುವ ಉದ್ದಾನ ವೀರಭದ್ರ ಇವೆರಡೂ ಕರ್ಣಾಟಕದಲ್ಲಿ ಪ್ರಸಿದ್ಧವಾದ ವೀರಭದ್ರಮೂರ್ತಿಗಳಾಗಿವೆ. ಈ ಉಭಯ ಮೂರ್ತಿಗಳೂ ಸುಮಾರು ಇಪ್ಪತ್ತು ಅಡಿ ಎತ್ತರವಾಗಿಯೂ, ಭವ್ಯವಾಗಿಯೂ ಇವೆ. ವೀರಭದ್ರದೇವಾಲಯಗಳಿರುವ

ಕಡೆಯಲ್ಲೆಲ್ಲ ವರುಷಕ್ಕೊಂದು ಅಗ್ನಿಕುಂಡ ನಡೆಯುತ್ತದೆ. ಆ ಕಾಲದಲ್ಲಿ ಭಕ್ತರು ಅಗ್ನಿಯನ್ನು ಹಾಯುತ್ತಾರೆ. ಇದು ವೀರಭದ್ರನು ದಕ್ಷಯಾಗವನ್ನು ನಾಶಮಾಡಿದ ಸ್ಮಾರಕವೆಂದು ವಿಚಾರಪರರು ತಿಳಿಯುತ್ತಾರೆ. ವೀರಶೈವ ಸಮಾಜದಲ್ಲಿ ಇರುವ ಪಂಚಗೋತ್ರಗಳಲ್ಲಿ (ವೀರ, ನಂದಿ, ಭೃಂಗಿ, ವೃಷಭ, ಸ್ಕಂದ) ಒಂದಾದ ವೀರಗೋತ್ರಕ್ಕೆ ವೀರಭದ್ರನು ಅಧಿಪತಿಯಾಗಿದ್ದಾನೆ. ವೀರಶೈವಸಮಾಜಕ್ಕೆ ಪೂಜ್ಯಗುರುಗಳಾದ ಶ್ರೀ ಭಗವತ್ಪಾದ ರೇಣುಕಾಚಾರ್ಯರ ಪರಂಪರಾಗತವಾದ ಮಠಗಳಲ್ಲಿ ವೀರಭದ್ರ ಮೂರ್ತಿಯು ಆರಾಧ್ಯದೇವತೆಯಾಗಿದೆ. ಶ್ರೀ ಶಿವಗಂಗಾ ಮೇಲಣಗವಿ ವೀರಸಿಂಹಾಸನಮಠ (ಬೆಂಗಳೂರು ಜಿಲ್ಲಾ) ಶ್ರೀ ರಂಭಾಪುರಿ ವೀರಸಿಂಹಾಸನ ಮಠ (ಕಡೂರು ಜಿಲ್ಲಾ) ಮೊದಲಾದ ಶ್ರೀ ರೇಣುಕರ ಸಂಬಂಧವಾದ ಮಠಗಳಲ್ಲೆಲ್ಲ ಇಂದಿಗೂ ಶ್ರೀ ವೀರಭದ್ರ ದೇವರು ಪ್ರಮುಖ ದೈವವೆನಿಸಿದೆ. ಇದರಿಂದ ವೀರಶೈವ ಧರ್ಮಕ್ಕೂ, ವೀರಭದ್ರ ದೇವರಿಗೂ ನಿಕಟ ಸಂಬಂಧವಿದೆಯೆಂದು ವಿದಿತವಾಗುತ್ತದೆ.

ಶ್ರೀವೀರಭದ್ರನಿಗೆ ೧೦೦೦ ಮುಖ, ೨೦೦೦ ಹಸ್ತ, ೩೦೦೦ ನೇತ್ರಗಳು ಎಂದು ಚೆನ್ನಬಸವ ಪುರಾಣದಲ್ಲಿ ಹೇಳಿದೆ. ಕೆಲವು ಕಡೆ ವೀರಭದ್ರನಿಗೆ ಪಂಚಮುಖ, ಸಹಸ್ರಭುಜ ಎಂದೂ, ಮತ್ತೆ ಕೆಲವು ಕಡೆ ಏಕಮುಖ, ಮೂವತ್ತೆರಡು ಭುಜವೆಂದೂ, ಇನ್ನೂ ಕೆಲವು ಕಡೆ ಏಕಮುಖ, ಚತುರ್ಭುಜ ಎಂದೂ ಹೇಳಿದೆ. ಈ ಕಾವ್ಯದಲ್ಲಿ ರಾಘವಾಂಕನು ವೀರಭದ್ರನಿಗೆ ಪಂಚಮುಖ, ಸಹಸ್ರಭುಜ ಎಂದು ಹೇಳಿದ್ದಾನೆ. (ಪದ್ಯ. ೬. ಸಂ. ೨)

ಅಲ್ಲದೆ ಕವಿಯು ವೀರಭದ್ರನನ್ನು ವೀರಕುಲಾಧೀಶ್ವರ, ಹಲಗೆಯ ಕಡುಗಲಿ ಎಂದು ಬಣ್ಣಿಸಿದ್ದಾನೆ. ಮತ್ತು ವೀರಭದ್ರನು "ನಡುನೆತ್ತಿಯ ಲಿಂಗ" ಯುಕ್ತನಾಗಿದ್ದನೆಂದು ಕವಿಯು ಹೇಳಿ, ಈ ವೀರಭದ್ರನು ಲಿಂಗಧಾರಿಯಾದ ವೀರಶೈವನೆಂದು ಸ್ಪಷ್ಟಪಡಿಸಿದ್ದಾನೆ, ಕೆಲವು ಸಂಸ್ಕೃತ ಶಿವಪುರಾಣಗಳಲ್ಲಿ ವೀರಭದ್ರನು ಶ್ರೀ ಮಾರುತಿಗೆ ಲಿಂಗಧಾರಣಮಾಡಿದನೆಂದು ಹೇಳಿದೆ. ಬೆಂಗಳೂರು, ಮತ್ತು ಹಾವೇರಿಗಳಲ್ಲಿರುವ ವೀರಭದ್ರ ದೇವಾಲಯಗಳಲ್ಲಿ. ಲಿಂಗಧಾರಿಯಾದ ಮಾರುತಿಯ ವಿಗ್ರಹವನ್ನು ನೋಡಬಹುದು,

೨ ಭದ್ರಾಣಿ:- ಇವಳು ವೀರಭದ್ರನ ಹೆಂಡತಿ. ಇವಳನ್ನು ಭದ್ರಕಾಳಿ ಎಂದು ಕೂಡ, ಕರೆಯುತ್ತಾರೆ. ಇವಳು ದಶಾಯುಧಸಂಯುತೆ ಎಂದು ರಾಘವಾಂಕನು ಹೇಳುತ್ತಾನೆ. ಇವಳು ನೀಲಾದ್ರಿಸದೃಶ ಶರೀರವುಳ್ಳವಳೆಂದು ಕವಿಗಳು ಬಣ್ಣಿಸಿದ್ದಾರೆ. ವೀರಭದ್ರನ ಕೋಪವನ್ನು ಶಾಂತಮಾಡುವ ಸಲುವಾಗಿ ಇವಳನ್ನು ಶಿವನು ಸೃಷ್ಟಿಮಾಡಿದನೆಂದೂ, ಅನುರೂಪನಾದ ವೀರಭದ್ರನಿಗೆ.ಲಗ್ನ ಮಾಡಿದನೆಂದೂ ಪುರಾಣಗಳಲ್ಲಿ ಹೇಳಿದೆ. ಇವಳು ಆಕಸ್ಮಿಕ ಸತಿಯಾಗಿ ಶಿವನ ಸಂಕಲ್ಪ ಮಾತ್ರದಿಂದ ಬೊಬ್ಬಿಡುತ್ತ, ಅಬ್ಬರಿಸುತ್ತ ತಲೆದೋರಿದಳು ಎಂದು ರಾಘವಾಂಕನು ಹೇಳುತ್ತಾನೆ. (ಸಂಧಿ. ೨. ಪದ್ಯ. ೧೬)

೩ ದಕ್ಷಬ್ರಹ್ಮ:- ಇವನು ನವಬ್ರಹ್ಮರಲ್ಲಿ ಒಬ್ಬ. ಇವನಿಗೆ ದಕ್ಷಪ್ರಜಾಪತಿಎಂಬ ಹೆಸರೂ ಉಂಟು. ಇವನೇ ಸ್ತ್ರೀಯರ ಸಂಪರ್ಕದಿಂದ ಪ್ರಜೋತ್ಪತ್ತಿಯ ಕಾರ್ಯವನ್ನು ಪ್ರಾರಂಭಿಸಿದವನಾದುದರಿಂದ ಇವನಿಗೆ 'ಪ್ರಜಾಪತಿ' ಎಂಬ ಹೆಸರು ಪ್ರಾಪ್ತವಾಗಿದೆ. ಇವನು ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನಬಲಗೈ ಹೆಬ್ಬೆಟ್ಟಿನಿಂದ ಹುಟ್ಟಿದನೆಂದೂ, ಇವನ ಹೆಂಡತಿ ಚತುರ್ಮುಖನ ಎಡಗೈ ಹೆಬ್ಬೆಟ್ಟಿನಿಂದ ಹುಟ್ಟಿದಳೆಂದೂ ಆದಿತ್ಯ ಪುರಾಣದಲ್ಲಿ ಹೇಳಿದೆ. ಇವನಿಗೆ ೬೦ ಮಂದಿ ಹೆಣ್ಣುಮಕ್ಕಳು. ಈ ಹೆಣ್ಣುಮಕ್ಕಳನ್ನು ಚಂದ್ರ, ಧರ್ಮಋಷಿ, ಭೃಗು, ಆಂಗಿರಸ, ಪುಲಸ್ತ್ಯ, ಪುಲ, ಕೃತು, ಅತ್ರಿ, ವಸಿಷ್ಠ ಮೊದಲಾದವರಿಗೆ ಕೊಟ್ಟು ಲಗ್ನಮಾಡಿದನೆಂನು ಪುರಾಣಗಳಲ್ಲಿ ಹೇಳಿದೆ. ಇವನು ಶಿವದ್ವೇಷಮಯವಾದ ಯಾಗವನ್ನು ಮಾಡಿದ್ದರಿಂದ, ವೀರಭದ್ರನಿಂದ ಹತನಾದನೆಂಬ ಕಥೆ ಭಾಗವತಾದಿ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ. ಈ ದಕ್ಷಯಾಗದಲ್ಲಿ ವೀರಭದ್ರನು ಇವನ ತಲೆಯನ್ನು ಕತ್ತರಿಸಿದನೆಂದೂ, ಕಡೆಗೆ ದಕ್ಷನ ಪತ್ನಿಯ ಪ್ರಾರ್ಥನೆಯಂತೆ ಅವನಿಗೆ ಒಂದು ಕುರಿಯ ತಲೆಯನ್ನು ಗಂಟುಹಾಕಿ ಪ್ರಾಣ ಪ್ರತಿಷ್ಠೆಮಾಡಿದನೆಂದೂ, ಆದ್ದರಿಂದ ಇವನಿಗೆ 'ಕುರಿದಲೆ' ಯವನೆಂದು ಹೆಸರುಂಟಾಯಿತೆಂದೂ ಪುರಾಣಗಳು ಹೇಳುತ್ತವೆ.

೪ ದಾಕ್ಷಾಯಣಿ:- ಇವಳು ದಕ್ಷಬ್ರಹ್ಮನ ಮಗಳು. ಇವಳಿಗೆ ಸತೀದೇವಿಯೆಂಬ. ಮತ್ತೊಂದು ಹೆಸರುಂಟು. ಇವಳು ಪರಮೇಶ್ವರನನ್ನು ಮದುವೆಯಾಗಿದ್ದಳು. ತಂದೆಯಾದ ದಕ್ಷನು ಶಿವದ್ವೇಷಿಯಾಗಿ ನಿರೀಶ್ವರ

ಯಾಗವನ್ನು ಕೈಗೊಂಡಾಗ ಅವನಿಗೆ ಬುದ್ಧಿ ಹೇಳುವ ಸಲುವಾಗಿ ಯಾಗಶಾಲೆಗೆ ಬಂದು ಕಡೆಗೆ ಶಿವನಿಂದೆಯನ್ನು ಕೇಳಲಾರದೆ ಯೋಗಾಗ್ನಿಯಲ್ಲಿ ಸುಟ್ಟುಹೋದಳು. ಮುಂದೆ ಗಿರಿರಾಜನ ಪತ್ನಿಯಾದ ಮೇನಾದೇವಿಯ ತಪಸ್ಸಿಗೆ ಮೆಚ್ಚಿ ಅವರಿಗೆ ಮಗಳಾಗಿ ಹುಟ್ಟಿದಳೆಂದು ಪುರಾಣಗಳಲ್ಲಿ ಹೇಳಿದೆ. ಈ ದಾಕ್ಷಾಯಣಿಯು ಪಾತಿವ್ರತ್ಯದ ಪರಮಾವಧಿಯೆಂದೂ, ಸ್ತ್ರೀ ಕುಲದ ಆದರ್ಶಮೂರ್ತಿಯೆಂದೂ ಕವಿಗಳು ಬಹಳವಾಗಿ ವರ್ಣಿಸಿದ್ದಾರೆ. ಈ ಗ್ರಂಥದಲ್ಲಿ ದಾಕ್ಷಾಯಣಿಯು ಅಗ್ನಿಮುಖದಿಂದ ಕೈಲಾಸಕ್ಕೆ ಹೋದಳೆಂದು ಹೇಳಿದೆ.

೩ ಭಗವಾನ್ ಶಂಕರ:- ಇವನು ದಾಕ್ಷಾಯಣಿಯ ಪತಿ. ವೀರಭದ್ರನ ತಂದೆ. ದಕ್ಷ ಬ್ರಹ್ಮನ ಅಳಿಯ. ಕೈಲಾಸದ ಅಧಿಪತಿ; ಸಮಸ್ತ ಲೋಕಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತ. ವಿಷ್ಣು, ಬ್ರಹ್ಮ, ಇಂದ್ರಾದಿ ದೇವತೆಗಳು ಇವನಿಗೆ ವಿಧೇಯರು. ಇವನನ್ನು ಪರಬ್ರಹ್ಮ, ಪರಮಪುರುಷ, ಪರಮೇಶ್ವರ ಎಂದು ಮೊದಲಾಗಿ ವೇದಾಗಮಗಳು ಉದ್ಘೋಷಿಸಿವೆ. ಇವನ ಹಣೆಗಣ್ಣಿನಲ್ಲಿಯೇ ವೀರಭದ್ರನು ಹುಟ್ಟಿದನು. ಕೈಲಾಸವೆಂಬುದು ಇವನ ರಾಜಧಾನಿ.

೪ ದಧೀಚಿ:- ಇವನು ಪ್ರಾಚೀನಕಾಲದ ಗಣ್ಯರಾದ ಋಷಿಗಳಲ್ಲಿ ಪ್ರಸಿದ್ಧನಾದವನು. ಇವನು ಉಗ್ರ ಶಿವಭಕ್ತ. ದಕ್ಷನಯಾಗ ಶಾಲೆಯಲ್ಲಿ ಶಿವನು ಇಲ್ಲದಿರುವುದನ್ನು ಕಂಡು, ಆ ಯಾಗವು ನಾಶವಾಗುವಂತೆ ಶಪಿಸಿದವನು ಈ ಮಹಾತ್ಮನೇ. ಹಲವು ವೀರಶೈವ ಗ್ರಂಥಗಳಲ್ಲಿ ಇವನಿಗೆ ಲಿಂಗಧಾರಣವಾಗಿದೆ. ಪ್ರಾಚೀನಶೈವಧರ್ಮದ ಉದ್ಧಾರಕರಲ್ಲಿ ದಧೀಚಿಯು ಒಬ್ಬನೆಂದು ಹೇಳಬಹುದು. ಇವನು ಪಂಪಾಕ್ಷೇತ್ರದಲ್ಲಿ ತನ್ನ ಆಶ್ರಮವನ್ನು ಮಾಡಿಕೊಂಡಿದ್ದನೆಂದು ದೇಶಾಭಿಮಾನದಿಂದ ಕವಿರಾಘವಾಂಕನು ಹೇಳಿದ್ದಾನೆ.

೫ ನಾರದ:- ಇವನು ಹಿಂದುಗಳ ಪುರಾಣಗಳಲ್ಲಿ ಅತ್ಯಂತ ಪ್ರಸಿದ್ಧನಾದ ಮಹರ್ಷಿ. ಇವನು ಬ್ರಹ್ಮಮಾನಸಪುತ್ರ. ನೈಷ್ಠಿಕ ಬ್ರಹ್ಮಚಾರಿ. ಇವನನ್ನು ಕವಿಗಳು ಉದಂತವೇದಿ, ಕಲಹಾಶನ, ಕಲಹಪ್ರಿಯ, ದುಗುಡಾಂಬುಧಿ ಮಂದರ ಎಂದು ಮೊದಲಾಗಿ ಕರೆದಿದ್ದಾರೆ. ಪ್ರಾಯೇಣ ನಮ್ಮ ಪ್ರಾಚೀನ

ಕಾಲದ ಯಾವ ಗ್ರಂಥಗಳಲ್ಲಿ ನೋಡಿದರೂ ನಾರದನ ಪಾತ್ರವಿದ್ದೇ ಇದೆ. ಪ್ರಕೃತ ಕಾವ್ಯದಲ್ಲಿಯೂ ನಾರದನು ಒಂದು ಪ್ರಮುಖ ಪಾತ್ರವನ್ನು ವಹಿಸಿಯೇ ಇದ್ದಾನೆ. ನಾರದ ಎಂಬ ಶಬ್ದಕ್ಕೆ ಜ್ಞಾನವನ್ನು ಉಪದೇಶಿಸತಕ್ಕವನು ಎಂದರ್ಥ. ( ನಾರಂ ದದಾತೀತಿ ನಾರದಃ)

೮ ಮಂತ್ರಿ ವಿದಗ್ಧ:. ಇವನು ದಕ್ಷಬ್ರಹ್ಮನ ಮುಖ್ಯಮಂತ್ರಿ. ಇವನು ಯಾಗ ಪ್ರಾರಂಭದ ಮೊದಲು ತನ್ನ ದೊರೆಗೆ ಬಹಳವಾಗಿ ಬುದ್ಧಿ ಹೇಳುತ್ತಾನೆ. ಆದರೂ, ಮೂರ್ಖನಾದ ದಕ್ಷನು ಇವನ ಮಾತಿಗೆ ಕಿವಿಗೊಡುವುದಿಲ್ಲ. ಈ ಕಾವ್ಯದಲ್ಲಿ ಇವನ ವ್ಯಕ್ತಿತ್ವವು ಚೆನ್ನಾಗಿ ನಿರೂಪಿಸಲ್ಪಟ್ಟಿದೆ.

೯ ಕೈಲಾಸ ಪರ್ವತ:- ಇದು ಭಗವಾನ್ ಶಂಕರನ ನಿವಾಸಸ್ಥಾನ. ಇದನ್ನು ಬೆಳ್ಳಿಯ ಬೆಟ್ಟವೆಂದು ಕನ್ನಡ ಕವಿಗಳು ಕರೆಯುತ್ತಾರೆ. ಈ ಕೈಲಾಸವು ಕಣ್ಣಿಗೆ ಕಾಣದ ಆಕಾಶದ ತುತ್ತತುದಿಯಲ್ಲಿದೆಯೆಂದು ಪೌರಾಣಿಕರು ಹೇಳುತ್ತಾರೆ. ಆದರೆ ಹಿಮಾಲಯದಲ್ಲಿರುವ ಕೈಲಾಸ ಪರ್ವತವೇ ಪುರಾಣ ಪ್ರಸಿದ್ಧವಾದ ಕೈಲಾಸವೆಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನಕಾಲದಲ್ಲಿ ನಂದಿ, ಭೃಂಗಿ, ವೃಷಭ, ಸ್ಕಂದ, ರೇಣುಕ, ದಾರುಕ ಮೊದಲಾದ ಗಣಕುಲದ ಜನರು, ಈ ಕೈಲಾಸಪರ್ವತದಲ್ಲಿ ವಾಸವಾಗಿದ್ದರೆಂದೂ, ಅವರೇ ದ್ರಾವಿಡರ ಮೂಲಪುರುಷರೆಂದೂ, ಈ ದ್ರಾವಿಡ ಕುಲದ ಅಧಿಪತಿಯೇ ಶಂಕರನೆಂದೂ ಮತ್ತೆ ಕೆಲವರು ಹೇಳುತ್ತಾರೆ.

೧೦ ಕನಖಳ ಪುರ:- ಇದು ದಕ್ಷನು ಯಾಗವನ್ನು ಮಾಡಿದ ಪ್ರದೇಶ. ಇದು ಕಾಶಿಗೆ ಪಡುವಣದಿಕ್ಕಿನಲ್ಲಿದೆಯೆಂದು ರಾಘವಾಂಕನು ಹೇಳಿದ್ದಾನೆ. ಉತ್ತರಹಿಂದೂಸ್ಥಾನದ ಪ್ರಸಿದ್ಧವಾದ ಒಂದು ಕ್ಷೇತ್ರವೆನಿಸಿರುವ ಹರಿದ್ವಾರದ ಸಮೀಪದಲ್ಲಿ ಈ ಕನಖಳಪುರ ಪ್ರದೇಶವನ್ನು ಜನರು ಈಗಲೂ ತೋರಿಸುತ್ತಾರೆ. ದಕ್ಷನು ಗಂಗಾಮೂಲದಲ್ಲಿ ತನ್ನ ಯಾಗಶಾಲೆಯನ್ನು ಮಾಡಿದ್ದನೆಂದು ವಿರೂಪಾಕ್ಷ ಪಂಡಿತನು ಚೆನ್ನಬಸವಪುರಾಣದಲ್ಲಿ ಹೇಳಿದ್ದಾನೆ.

೧೧ ಪಂಪಾಕ್ಷೇತ್ರ:- ಇದಕ್ಕೆ ದಕ್ಷಿಣಕಾಶಿ ಎಂಬ ಹೆಸರಿದೆ. ಈ ಕಾವ್ಯದಲ್ಲಿ ದಧೀಚಿಯು ಇಲ್ಲಿ ತಪಸ್ಸುಮಾಡುತ್ತಿದ್ದ

ನೆಂದು ಕವಿಯು ಹೇಳುತ್ತಾನೆ. ಈ ಕ್ಷೇತ್ರವು ಕರ್ಣಾಟಕದೇಶದ ಬಳ್ಳಾರಿ ಜಿಲ್ಲೆಯಲ್ಲಿದೆ. ಈ ಕ್ಷೇತ್ರದಲ್ಲಿ ಮತಂಗ, ಮಾಲ್ಯವಂತ, ಋಷ್ಯ ಮೂಕ, ಕಿಷ್ಕಿಂಥ ಮತ್ತು ಹೇಮಕೂಟ ಎಂಬ ಪಂಚ ಪರ್ವತಗಳಿವೆ. ಇಲ್ಲಿ ಮಂಗಳಪ್ರದವಾದ ತುಂಗಭದ್ರಾನದಿ ಹರಿಯುತ್ತಿದೆ. ರಾಮಾಯಣ ದಲ್ಲಿ ಪ್ರಸಿದ್ಧವಾದ ಪಂಪಾಸರೋವರವಿದೆ. ಮತ್ತು ಶಬರಿಯ ಆಶ್ರಮವಿದೆ. ರಾಮಾಯಣದಲ್ಲಿ ಪ್ರಸಿದ್ಧನಾದ ಮಾರುತಿಯು ಈ ಕ್ಷೇತ್ರದಲ್ಲಿ ವಾಸವಾ ಗಿದ್ದ ಅಂಜನಾದೇವಿಯ ಮಗನೆಂದು ತಿಳಿದುಬಂದಿದೆ. ಕರ್ಣಾಟಕದ ಪ್ರಸಿದ್ಧ ರಾಜಧಾನಿಗಳಾದ ಕಿಷ್ಕಿಂಥೆ (ಆನೇಗುಂದಿ) ಮತ್ತು ವಿಜಯನಗರ ಈ ಕ್ಷೇತ್ರದಲ್ಲಿಯೇ ಇವೆ. ಪಂಪಾವಿರೂಪಾಕ್ಷನು ಈ ಕ್ಷೇತ್ರದ ಅಧಿಪತಿ. ಇಲ್ಲಿ ಪಂಪಾಪತಿಯ ದೊಡ್ಡಗುಡಿ ಯಿದೆ. ಹಲವುಶತಮಾನಗಳಿಂದ ಇಲ್ಲಿ ಹರಿಹರ, ರಾಘವಾಂಕ, ಲಕ್ಕಣಾಮಾತ್ಯ, ಜಕ್ಕಣಾರ್ಯ, ಚಾಮರಸ, ವಿರೂಪಾಕ್ಷಪಂಡಿತ, ಅದ್ರೀಶಕವಿ ಮೊದಲಾದ ಕನ್ನಡಕವಿಗಳು ಆಗಿ ಹೋಗಿದ್ದಾರೆ. ರಾಮಾಯಣದಲ್ಲಿಯೂ, ಕರ್ಣಾಟಕದ ಚರಿತ್ರೆಯಲ್ಲಿಯೂ ಪಂಪಾಕ್ಷೇತ್ರವು ಪ್ರಖ್ಯಾತಿಯನ್ನು ಪಡೆದಿದೆ. ವಿದ್ಯಾರಣ್ಯರು ತಪಸ್ಸಿದ್ಧಿ ಯನ್ನು ಪಡೆದುದು ಈ ಪುಣ್ಯಭೂಮಿಯಲ್ಲಿಯೇ. ರಾಮಾಯಣದಲ್ಲಿ ಪ್ರಸಿ ದ್ಧರಾದ ವಾಲಿ, ಸುಗ್ರೀವ ಮೊದಲಾದ ವಾನರ ಕುಲದ ಜನ ಇಲ್ಲಿನವರೇ.

೧೨ ವಸಿಷ್ಠ ಮತ್ತು ವಿಶ್ವಾಮಿತ್ರ:- ಇವರಿಬ್ಬರೂ ಪ್ರಾಚೀನಕಾಲದ ಪ್ರಸಿದ್ಧರಾದ ಮಹರ್ಷಿಗಳು. ವಸಿಷ್ಠನು ಬ್ರಹ್ಮರ್ಷಿ. ವಿಶ್ವಾಮಿತ್ರನು ರಾಜ ರ್ಷಿ. ಇವರೀರ್ವರ ದೀರ್ಘದ್ವೇಷದ ಫಲವೇ ಹರಿಶ್ಚಂದ್ರನ ಕಥೆ. ಈಗ್ರಂಥ ದಲ್ಲಿ ಇವರ ಹೆಸರು ಎಲ್ಲೋ ಒಂದುಕಡೆ ಬರುತ್ತದೆ. [ಸಂಧಿ ೧. ಪದ್ಯ. ೧೩.]

೧೩ ಅಗ್ನಿಷ್ಟೋಮ:- ಇದು ಷೋಡಶ ಯಾಗಗಳಲ್ಲಿ ಪ್ರಸಿದ್ಧವಾ ದುದು. ದಕ್ಷನು ಶಿವನನ್ನು ನಾಶಮಾಡುವ ಸಲುವಾಗಿ ಈ ಯಾಗವನ್ನು ಕೈಗೊಂಡನೆಂದು ರಾಘವಾಂಕನು ಹೇಳಿದ್ದಾನೆ. ಈ ಯಾಗದ ಲಕ್ಷಣವನ್ನು ನೋಡಿದರೆ ಇದು ಹಿಂಸಾಮಯವಾದ ಯಜ್ಞವೆಂದು ತೋರಿಬರುತ್ತದೆ. [ಸಂಧಿ ೧. ಪದ್ಯ ೩೭] ದಕ್ಷನು ಅಶ್ವಮೇಧಯಾಗಮಾಡಿದನೆಂದು ಚೆನ್ನ ಬಸವಪುರಾಣದಲ್ಲಿ ಹೇಳಿದೆ.

೧೪ ನರಸಿಂಹ:- ಹಿರಣ್ಯಕಶ್ಯಪುವೆಂಬ ರಾಕ್ಷಸನನ್ನು ಕೊಲ್ಲಲು ನಾರಾಯಣನು ಧರಿಸಿದ ಒಂದು ಅವತಾರದ ಹೆಸರು. ತಲೆಯು ಸಿಂಹನಂತೆಯೂ, ಉಳಿದ ದೇಹವು ಮನುಷ್ಯನಂತೆಯೂ, ಇದ್ದುದರಿಂದ ಈ ಅವತಾರಕ್ಕೆ ನರಸಿಂಹಾವತಾರವೆಂದು ಹೆಸರಾಯಿತು. ಹೀಗೆ ಹಿರಣ್ಯಕಶ್ಯಪುವಿನ ರಕ್ತವನ್ನು ಕುಡಿದು ನರಸಿಂಹನು ಪ್ರಮತ್ತನಾಗಿ ಲೋಕಗಳನ್ನು ಹಿಂಸಿಸಲು ಪ್ರಾರಂಭಿಸಿದಾಗ, ವೀರಭದ್ರನು ದೇವತೆಗಳ ಪ್ರಾರ್ಥನಾನುಸಾರ, ಶರಭಾವತಾರವನ್ನು ಧರಿಸಿ ನರಸಿಂಹಾವತಾರವನ್ನು ಪರಿಸಮಾಪ್ತಿಮಾಡಿ ಲೋಕಗಳನ್ನು ಕಾಪಾಡಿದನೆಂದು ಪುರಾಣಗಳಲ್ಲಿ ಕಥೆಯಿದೆ. ಈ ವಿಷಯವಾಗಿ ರಾಘವಾಂಕನು 'ಶರಭಚಾರಿತ್ರ್ಯ' ಎಂಬ ಮತ್ತೊಂದು ಗ್ರಂಥವನ್ನು ಬರೆದಿರುವನೆಂದು ಪ್ರತೀತಿಯಿದೆ. ಆದರೆ ಆ ಗ್ರಂಥ ಇನ್ನೂ ಹಸ್ತಗತವಾಗಿಲ್ಲ. [ಪದ್ಯ ೪೨ ಸಂಧಿ ೨]

೧೫ ಕೃಷ್ಣಾಜಿನ:- ಈ ಗ್ರಂಥದಲ್ಲಿ ಕೃಷ್ಣಾಜಿನದ ವಿಚಾರ ಬಂದಿದೆ. ಅದರ ತಾತ್ಪರ್ಯವೇನಂದರೆ:- ಶ್ರೀ ಮಹಾವಿಷ್ಣುವು ದಕ್ಷಯಾಗದ ಸಂರಕ್ಷಣೆ ಮಾಡುವಾಗ ವೀರಭದ್ರನಕೂಡ ಭಯಂಕರವಾಗಿ ಯುದ್ಧಮಾಡಿದನೆಂದೂ, ಕಡೆಗೆ ವೀರಭದ್ರನ ಪ್ರತಾಪ ಹೆಚ್ಚಾಗಲು, ಆಗ ವಿಷ್ಣುವು ಅಂಜಿ ಪ್ರಾಣಸಂರಕ್ಷಣೆಗಾಗಿ ಜಿಂಕೆಯ ಆಕಾರವನ್ನು ಧರಿಸಿ ಓಡಲು ಪ್ರಾರಂಭಿಸಿದನೆಂದೂ, ಆಗ ವೀರಭದ್ರನು ತನ್ನ ಕ್ರೂರವಾದ ಬಾಣಗಳಿಂದ ಜಿಂಕೆಯನ್ನು ಹೊಡೆದನೆಂದೂ, ಆಗ ವಿಷ್ಣುವು ಜಿಂಕೆಯ ಆಕಾರವನ್ನು ಬಿಟ್ಟು ತನ್ನ ನಿಜಸ್ವರೂಪದಿಂದ ಮೈದೋರಿ ವೀರಭದ್ರನನ್ನು ಕ್ಷಮಾಯಾಚನೆ ಮಾಡಿದನೆಂದೂ, ಆಗ ಜಿಂಕೆಯ ಚರ್ಮವನ್ನು ಸುಲಿದು ಯಜ್ಞಗಳಿಗ ಶಿವಾರ್ಚನಾದಿಕಾಲಗಳಿಗೆ ಉಪಯೋಗಿಸುವ ಸಲುವಾಗಿಯೂ, ವಿಷ್ಣುವು ಜಿಂಕೆಯ ಸ್ವರೂಪವನ್ನು ಧರಿಸಿದ್ದರ ಸ್ಮಾರಕವಾಗಿಯೂ ವೀರಭದ್ರನಿಂದ ಕೃಷ್ಣಾಜಿನವು ಪರಿಗ್ರಹಿಸಲ್ಪಟ್ಟಿತೆಂದೂ ಪುರಾಣಗಳಲ್ಲಿ ಹೇಳಲ್ಪಟ್ಟಿದೆ.

೧೬ ನಂದಿ ಮತ್ತು ಭೃಂಗಿ:- ಇವರೀರ್ವರೂ ಕೈಲಾಸದಲ್ಲಿ ಅತ್ಯಂತ ಪ್ರಮುಖರಾದ ಪ್ರಮಥರು. ನಂದಿಯು ಶಿವನ ಅಪರಾವತಾರವೆಂದೂ, ಈ ನಂದಿಯೇ ಕಲ್ಯಾಣದಲ್ಲಿ ವೀರಶೈವ ಧರ್ಮವನ್ನು ಉದ್ಧಾರಮಾಡುವುದಕ್ಕೆ ಬಸವನೆಂಬ ಹೆಸರಿನಿಂದ ಅವತಾರಮಾಡಿದನೆಂದೂ ಹಲವು ಪುರಾಣಗಳಲ್ಲಿ

ಹೇಳಿದೆ.. ಸ್ಕಾಂದ ಪುರಾಣದ ದಕ್ಷಯಾಗದ ಕಥೆಯಲ್ಲಿ ನೈಮಿಷಾರಣ್ಯದಲ್ಲಿ ಕೂಡಿದ್ದ ಒಂದು ಋಷಿಗಳ ಸಭೆಯಲ್ಲಿ, ಶಿವನು ದಕ್ಷಬ್ರಹ್ಮನಿಗೆ ಸನ್ಮಾನವನ್ನು ಮಾಡಲಿಲ್ಲವೆಂಬ ಕಾರಣದಿಂದ, ದಕ್ಷನು ಶಿವನ ಮೇಲೆ ಕೋಪಿಸಿಕೊಂಡಾಗ ಶಿವಭಕ್ತ ಶಿರೋಮಣಿಯಾದ ನಂದಿಯು ದಕ್ಷನನ್ನು ಶಪಿಸಿದನೆಂದು ಹೇಳಿದೆ. ಮುಖ್ಯವಾಗಿ ಶಿವಧರ್ಮ ಶಾಸ್ತ್ರದಲ್ಲಿ ನಂದಿಗೆ ಅತ್ಯಂತ ಪ್ರಾಮುಖ್ಯತೆಯಿದೆ, ಈ ನಂದಿಯ ಮುಖ ಮೂರುತಿಯ ಮುಖದಂತಿದೆ.

ಭೃಂಗಿಯು ಮೂರು ಕಾಲುಳ್ಳವನೆಂದೂ, ಶಿವನ ಸಭೆಯಲ್ಲಿ ನರ್ತನ ಮಾಡತಕ್ಕವನೆಂದೂ, ಮಾಯೆಯನ್ನು ಗೆದ್ದವನೆಂದೂ ಶಿವಪುರಾಣಗಳಲ್ಲಿ ಪ್ರಸಿದ್ಧನಾಗಿದ್ದಾನೆ. ರಾಘವಾಂಕನು ಬರೆದ ಸಿದ್ಧರಾಮ ಪುರಾಣದಲ್ಲಿ ಈ ಭೃಂಗಿಯು ಕೈಲಾಸದ ಸಭೆಯಲ್ಲಿ ಅದ್ರಿಶಿರ, ಊರ್ಧ್ವಶಿರ ಎಂಬ ಗಂಧರ್ವರು ತನ್ನನ್ನು ನೋಡಿ ನಕ್ಕುದರ ದೆಸೆಯಿಂದ, ಅವರು ನರಜನ್ಮದಲ್ಲಿ ಹುಟ್ಟುವಂತೆ ಶಾಪವನ್ನು ಕೊಟ್ಟನೆಂದೂ, ಮತ್ತೆ ಅವರ ಕೋರಿಕೆಯಂತೆ ಅವರ ಹೊಟ್ಟೆಯಲ್ಲಿ ಓರ್ವಶಿವಯೋಗಿಯು ಮಗನಾಗಿ ಹುಟ್ಟಿದರೆ ಅವರ ನರ ಜನ್ಮ ಹೋಗುವುದೆಂದು ವಿಶಾಪವನ್ನು ಕೊಟ್ಟನೆಂದೂ, ಈ ಶಾಪ, ವಿಶಾಪಗಳ ಫಲವಾಗಿ ಗಂಧರ್ವರು ಸೊನ್ನಲಿಗೆಯಲ್ಲಿ ಮುದ್ದುಗೊಂಡ ಮತ್ತು ಸುಗ್ಗವ್ವೆಯೆಂಬ ದಂಪತಿಗಳಾಗಿ ಹುಟ್ಟಿದರೆಂದೂ, ಅವರ ಹೊಟ್ಟೆಯಲ್ಲಿ ಶಿವನ ಅಪ್ಪಣೆಯಂತೆ ಶಿವಯೋಗಿ ಸಿದ್ಧರಾಮನು ಮಗನಾಗಿ ಜನ್ಮಿಸಿದುದರಿಂದ ಅವರ ನರಜನ್ಮದ ದೋಷವು ಹೋಯಿತೆಂದೂ ಸಿದ್ಧರಾಮ ಪುರಾಣದಲ್ಲಿ ಹೇಳಿದೆ.

ಈ ನಂದಿ ಮತ್ತು ಭೃಂಗಿಗಳು ಶಿಲಾದಮುನಿಯ ಮಕ್ಕಳೆಂದು ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿದೆ. ಈ ನಂದಿ ಭೃಂಗಿಗಳೇ ಲಿಂಗಧಾರಣ ಶಿವಧರ್ಮವನ್ನು (ವೀರಶೈವ ಧರ್ಮ) ಭೂಮಿಯಲ್ಲಿ ಪ್ರತಿಷ್ಠಿಸಿದರೆಂದು, ಸ್ಕಾಂದ, ಶಿವಧರ್ಮ ಇತ್ಯಾದಿ ಗ್ರಂಥಗಳಲ್ಲಿ ಹೇಳಿದೆ.

——:o:——

# ಶಬ್ದಕೋಶ

## ಅ

| | | |
|---|---|---|
| ಅಂಕಿಸು | ೧-೧೧ | ಗಮನಿಸು, ನೋಡು |
| ಅಗ್ಗಿಸು | ೨-೨೭ | ಅವನತಿಗೆ ಕಾರಣವಾಗು |
| ಅಜಪಶು | ೨-೪೫ | ಯಜ್ಞಕ್ಕೆ ತಂದ ಮೇಕೆ |
| ಅಟ್ಟು | ೧-೩೦ | ಕಳುಹಿಸು |
| ಅಡಗು | ೧-೭ | ಮಾಂಸ |
| ಅಣಕಿಸು | ೧-೧೦ | ಹೀಯಾಳಿಸು |
| ಅಂತಸ್ಥ | ೧-೨೨ | ಮನಸ್ಸಿನ ಗುಟ್ಟು |
| ಅದ್ದಿಸು | ೨-೨೫ | ಮುಳುಗಿಸು |
| ಅಧ್ವರ | ೧-೧<br>೧-೬೮ | ಯಜ್ಞ, ಯಾಗ |
| ಅನುವು | ೧-೬೯ | ವಿಚಾರ, ನೀತಿ |
| ಅರೆವೆಣ್ಣು | ೧-೪೮ | ಅರ್ಧನಾರೀಶ್ವರ, ಶಿವ |
| ಅವಿ | ೨-೫೫ | ಟಗರು |
| ಅಸಿಲತೆ | ೨-೨೨ | ಬಳುಕುವಖಡ್ಗ |
| ಅಸ್ಫಾಟಿಸು | ೨-೨೫ | ತೊಡೆತಟ್ಟಿ ಶಬ್ದ ಮಾಡು |
| ಅಳವಡು | ೨-೫ | ಮನೋಹರವಾಗು |
| ಅಳಿಯ | ೧-೪೮ | ಮಗಳಗಂಡ, ಜಾಮಾತ |
| ಅಳಿ | ೧-೩೬ | ನಾಶ |
| ಅಕ್ಷರ | ೧-೩ | ನಾಶವಾಗದುದು |
| ಅಕ್ಷಯ | ೧-೩ | ನಾಶರಹಿತ |

## ಆ

| | | |
|---|---|---|
| ಆಳಾಪ | ೧-೧ | ಆರ್ಭಟೆ |
| ಆಣತಿ | ೧-೧೮ | ಆಜ್ಞೆ |
| ಆರ್ತ | ೧-೭೦ | ದುಃಖಿತ |

## ಇ

| | | |
|---|---|---|
| ಇಡುಕುರ | ೧-೨<br>೧-೪೪ | ಗುಂಪು, ದಟ್ಟವಾದ |
| ಇಸ್ಸಿ | ೨-೫೦ | ಅಸಹ್ಯ, ಜಿಗುಪ್ಸೆ. |

| | | |
|---|---|---|
| ಇಡಿಕು | ೧-೨೬ | ಬೇಸರಪಡು |
| ಇಂಧನ | ೧-೫೪ | ಕಟ್ಟಿಗೆ, ಸೌದೆ |

## ಉ

| | | |
|---|---|---|
| ಉಡು | ೧-೨ | ತಾರೆ, ನಕ್ಷತ್ರ |
| ಉಡುಕುಳಿ | ೧-೯ | ಸಾಮಾನ್ಯ, ಕೇವಲ |
| ಉಡುಗೊರೆ | ೧-೧೯ | ಬಹುಮಾನ |
| ಉಬ್ಬೆಗ | ೧-೨೫ | ಚಿಂತೆ, ವ್ಯಸನ |
| ಉರವಣಿಸು | ೧-೨೬ | ಗರ್ವಪಡು |
| ಉರಿಗಣ್ಣಮಗ | ೨-೨೩ | ವೀರಭದ್ರ (ಶಿವನ ಹಣೆಗಣ್ಣಿನಲ್ಲಿ ಹುಟ್ಟಿದವ) |
| ಉಲಿ | ೨-೨೩ | ಧ್ವನಿ, ಕೂಗು |

## ಎ

| | | |
|---|---|---|
| ಎರಗು | ೧-೨೦ | ನಮಸ್ಕರಿಸು, ಶರಣುಬಾ |
| ಎರಳೆ | ೨-೧೧ | ಜಿಂಕೆ, ಚಿಗರೆ |
| ಎಸಕ | ೨-೪೨ | ಕೀರ್ತಿ, ಯಶಸ್ಸು |
| ಎಸರು | ೨-೨ | ಕುದಿಯುವ ನೀರು |

## ಐ

| | | |
|---|---|---|
| ಐವೇದ | ೧-೨೦ | ಐದುವೇದ |
| ಐದರೆ | ೧-೫೮, ೨-೧೪ | ಇದ್ದಾರೆ |

## ಒ

| | | |
|---|---|---|
| ಒಡ್ಡು | ೨-೧೦ | ಪ್ರವಾಹವನ್ನು ತಡೆಗಟ್ಟು |
| ಒದೆಸೆಂಡು | ೨-೪೭ | ಕಾಲು ಚೆಂಡು |
| ಒರಲು | ೧-೫೫ | ಕೂಗು, ಅರಚು |
| ಒಬ್ಬುಳಿ | ೧-೧೧ | ಸಮೂಹ, ಗುಂಪು |

## ಕ

| | | |
|---|---|---|
| ಕರ್ಕಶ | ೧-೭ | ಕ್ರೂರವಾದ |
| ಕಕ್ಕುಲತೆ | ೧-೫೩ | ಸಂದೇಹ |
| ಕಂದ | ೧-೧೧ | ಫಲ, ಹಣ್ಣು |
| ಕಂದೆರವೆ | ೧-೨೫ | ದಿಟ್ಟಿಸಿದ ನೋಟ |
| ಕಡಲು | ೧-೪ | ಸಮುದ್ರ |
| ಕಡ್ಡಣಿಕೆ | ೧-೨<br>೨-೨೧ | ಜಡೆ |
| ಕಡೆಗಾಲ | ೩-೨ | ಪ್ರಳಯಕಾಲ |
| ಕಡೆಗೊಂಟು | ೧-೩೧ | ಕಡೆಯ ಮೂಲೆ |
| ಕಲಗೆಡು | ೧-೫೯ | ದಿಕ್ಕುಗಾಣದಿರು |
| ಕಣಿ | ೧-೪ | ಆಸರೆ, ಆಶ್ರಯಸ್ಥಾನ |
| ಕಣೆ | ೨-೪೦ | ಬಾಣ |
| ಕರ್ಪರ . | ೩-೪ | ಚಿಪ್ಪು |
| ಕಾಳಗ | ೨-೨೪ | ಯುದ್ಧ |
| ಕುತ್ತಾರ | ೧-೧೬ | ? |
| ಕುನ್ನಿ | ೧-೬೫ | ಕ್ಷುದ್ರಪ್ರಾಣಿ, ನಾಯಿ |
| ಕುಳಿಕ | ೨-೯ | ಕೃಷ್ಣಸರ್ಪ |
| ಕುಂತ | ೧-೨೩ | ಒನಕೆ (ಒಂದು ಆಯುಧ) |
| ಕೂರ್ತು | ೧-೧ | ಪ್ರೀತಿಸಿ, ಒಲಿದು |
| ಕೆಡು ನುಡಿ | ೧-೬೫ | ಕೆಟ್ಟಮಾತು |
| ಕೆಲಸಾರ | ೧-೫೬ | ಹತ್ತಿರ ಬಾ |
| ಕೇಳಿಕೆ | ೧-೧೪ | ನೃತ್ಯದಿಂದ ಕೂಡಿದ ಗಾಯನ |
| ಕೈವಾರ | ೧-೧೮ | ಹೊಗಳಿಕೆ |
| ಕೊಸರು | ೧-೨೬ | ಹೊರಸೂಸು |
| ಕೃತಿ | ೧-೮ | ಕಾವ್ಯ |

## ಖ

| | | |
|---|---|---|
| ಖಂಡೆಯ | ೨-೯ | ಖಡ್ಗ |
| ಖಳ | ೨-೨೬ | ನಿರುತಿ |

| | | |
|---|---|---|
| ಇಡಿಕು | ೧-೨೬ | ಬೇಸರಪಡು |
| ಇಂಧನ | ೧-೫೪ | ಕಟ್ಟಿಗೆ, ಸೌದೆ |

## ಉ

| | | |
|---|---|---|
| ಉಡು | ೧-೨ | ತಾರೆ, ನಕ್ಷತ್ರ |
| ಉಡುಕುಳಿ | ೧-೯ | ಸಾಮಾನ್ಯ, ಕೇವಲ |
| ಉಡುಗೊರೆ | ೧-೧೯ | ಬಹುಮಾನ |
| ಉಬ್ಬೆಗ | ೧-೨೫ | ಚಿಂತೆ, ವ್ಯಸನ |
| ಉರವಣಿಸು | ೧-೨೬ | ಗರ್ವಪಡು |
| ಉರಿಗಣ್ಣಮಗ | ೨-೨೩ | ವೀರಭದ್ರ (ಶಿವನ ಹಣೆಗಣ್ಣಿನಲ್ಲಿ ಹುಟ್ಟಿದವ) |
| ಉಲಿ | ೨-೨೩ | ಧ್ವನಿ, ಕೂಗು |

## ಎ

| | | |
|---|---|---|
| ಎರಗು | ೧-೨೦ | ನಮಸ್ಕರಿಸು, ಶರಣುಬಾ |
| ಎರಳೆ | ೨-೧೧ | ಜಿಂಕೆ, ಚಿಗರೆ |
| ಎಸಕ | ೨-೪೨ | ಕೀರ್ತಿ, ಯಶಸ್ಸು |
| ಎಸರು | ೨-೨ | ಕುಡಿಯುವ ನೀರು |

## ಐ

| | | |
|---|---|---|
| ಐವೇದ | ೧-೨೦ | ಐದುವೇದ |
| ಐದರೆ | ೧-೫೮<br>೨-೧೪ | ಇದ್ದಾರೆ |

## ಒ

| | | |
|---|---|---|
| ಒಡ್ಡು | ೨-೧೦ | ಪ್ರವಾಹವನ್ನು ತಡೆಗಟ್ಟು |
| ಒದೆಸೆಂಡು | ೨-೪೭ | ಕಾಲು ಚೆಂಡು |
| ಒರಲು | ೧-೫೫ | ಕೂಗು, ಅರಚು |
| ಒಬ್ಬುಳಿ | ೧-೧೧ | ಸಮೂಹ, ಗುಂಪು |

## ಕ

| | | |
|---|---|---|
| ಕರ್ಕಶ | ೧-೭ | ಕ್ರೂರವಾದ |
| ಕಕ್ಕುಲತೆ | ೧-೫೩ | ಸಂದೇಹ |
| ಕಂದ | ೧-೧೧ | ಫಲ, ಹಣ್ಣು |
| ಕಂದೆರವೆ | ೧-೨೫ | ದಿಟ್ಟಿಸಿದ ನೋಟ |
| ಕಡಲು | ೧-೪ | ಸಮುದ್ರ |
| ಕಡ್ಡಣಿಕೆ | ೧-೨<br>೨-೨೧ | ಜಡೆ |
| ಕಡೆಗಾಲ | ೩-೨ | ಪ್ರಳಯಕಾಲ |
| ಕಡೆಗೊಂಟು | ೧-೩೧ | ಕಡೆಯ ಮೂಲೆ |
| ಕಲಗೆಡು | ೧-೫೯ | ದಿಕ್ಕುಗಾಣದಿರು |
| ಕಣಿ | ೧-೪ | ಆಸರೆ, ಆಶ್ರಯಸ್ಥಾನ |
| ಕಣೆ | ೨-೪೦ | ಬಾಣ |
| ಕರ್ಪರ . | ೩-೪ | ಚಿಪ್ಪು |
| ಕಾಳಗ | ೨-೨೪ | ಯುದ್ಧ |
| ಕುತ್ತಾರ | ೧-೧೬ | ? |
| ಕುನ್ನಿ | ೧-೬೫ | ಕ್ಷುದ್ರಪ್ರಾಣಿ, ನಾಯಿ |
| ಕುಳಿಕ | ೨-೯ | ಕೃಷ್ಣಸರ್ಪ |
| ಕುಂತ | ೧-೨೩ | ಒನಕೆ (ಒಂದು ಆಯುಧ) |
| ಕೂರ್ತು | ೧-೧ | ಪ್ರೀತಿಸಿ, ಒಲಿದು |
| ಕೆಡು ನುಡಿ | ೧-೬೫ | ಕೆಟ್ಟಮಾತು |
| ಕೆಲಸಾರ | ೧-೫೬ | ಹತ್ತಿರ ಬಾ |
| ಕೇಳಿಕೆ | ೧-೧೮ | ನೃತ್ಯದಿಂದ ಕೂಡಿದ ಗಾಯನ |
| ಕೈವಾರ | ೧-೧೮ | ಹೊಗಳಿಕೆ |
| ಕೊಸರು | ೧-೨೬ | ಹೊರಸೂಸು |
| ಕೃತಿ | ೧-೮ | ಕಾವ್ಯ |

## ಖ

| | | |
|---|---|---|
| ಖಂಡೆಯ | ೨-೯ | ಖಡ್ಗ |
| ಖಳ | ೨-೨೬ | ನಿರುತಿ |

| | | |
|---|---|---|
| ಖೇಚರ | ೧-೩೫ | ಆಕಾಶಗಾಮಿ |
| ಖೇಟಗ | ೨-೩೧ | ಡಾಲು, ಗುರಾಣಿ |

## ಗ

| | | |
|---|---|---|
| ಗಜಪಡೆ | ೨-೩೩ | ಆನೆಯ ಗುಂಪು |
| ಗುರುಲಘುವರಿಯದವಳು | ೧-೬೯ | ತಿಳುವಳಿಕೆ ಇಲ್ಲದವಳು |
| ಗೆಲ್ಲುವರೆ | ೨-೫೦ | ಜಯಭೇರಿ |
| ಗೋವಳಗಟ್ಟಿಗೆ | ೨-೩೩ | ದನಗಾಹಿಗಳ ಕೈಗೋಲು |

## ಘ

| | | |
|---|---|---|
| ಘಿಮ್ಮಿಡು | ೨-೭ | ಘಿಮ್ಮೆಂದು ಶಬ್ದಮಾಡು |
| ಘೂರ್ಮಿಸು | ೧-೬೪ | ಗರ್ಜಿಸು |

## ಚ

| | | |
|---|---|---|
| ಚಮೂವರ | ೧-೩೨ | ದಂಡನಾಯಕ, ಮಂತ್ರಿ |
| ಚಿತ್ರದ ಕಂಗಳು | ೧-೨೦ | ಯೋಗದೃಷ್ಟಿ |

## ಜ

| | | |
|---|---|---|
| ಜನ್ನ | ೧-೨೭ | ಯಜ್ಞ |
| ಜಡೆಯ ಜಡರು | ೧-೬೫ | ಮೂರ್ಖ ಸಂನ್ಯಾಸಿಗಳು |
| ಜಯಸೇಸೆ | ೧-೧೭ | ಗೆಲುವನ್ನು ಕೋರುವ ಮಂತ್ರಾಕ್ಷತೆ |

## ತ

| | | |
|---|---|---|
| ತಾರೆ | ೧-೩೪ | ಎಕ್ಕದ ಗಿಡ |
| ತಾವರೆಗಣ್ಣ | ೧-೨೦ | ವಿಷ್ಣು, ಕಮಲಾಕ್ಷ |
| ತುತಿಸು | ೧-೯ | ಸ್ತೋತ್ರಮಾಡು |
| ತೊಡೆಸೋಕು | ೧-೧೫ | ಸಮೀಪ, ಸನಿಹ |

| | | |
|---|---|---|
| ತವಕ | ೧-೪೩ | ಆತುರ |
| ತವನಿಧಿ | ೧-೪೩ | ಭಂಡಾರ |
| ತುಡುಕು | ೧-೬೫ | ಹಿಡಿ, ಮೇಲೆಬೀಳು |
| ತಮಂಧ | ೧-೬೪ | ಕತ್ತಲು, ಅಂಧಕಾರ |
| ತಳಿ | ೨-೧೩ | ಒಣಗಿದ ಮರದ ಗುಂಪು |

## ಥ

| | | |
|---|---|---|
| ಥರಂ | ೧-೧೫ | ರೀತಿ, ವಿಧಾನ |

## ದ

| | | |
|---|---|---|
| ದಟವಟಿಸು | ೧-೪೫ | ಆರ್ಭಟಿಸು |
| ದುಗುಡ | ೧-೫೬ | ಚಿಂತೆ ತಾಪ, |
| ದಣ್ಣನೆದಣಿ | ೧-೨ | ತೃಪ್ತಿಪಡು |
| ಧನಿ | ೧-೬೩ | ಕುಬೇರ |
| ದಿಙ್ನಾಥರು | ೨-೧೦ | ದಿಕ್ಪಾಲಕರು |
| ದಳ್ಳುರಿ | ೨-೨ | ಚಾಚುವ ಬೆಂಕಿ |
| ದಲ್ಲಣ | ೨-೧೪ | ನಾಶಮಾಡಿದವ |
| ದೊಣೆ | ೨-೩೦ | ಬತ್ತಳಿಕೆ |
| ದೂವಾಳಿಸು | ೨-೩೦ | ಓಡು |

## ನ

| | | |
|---|---|---|
| ನಿಗುಚು | ೨-೯ | ನೆಟ್ಟಗೆ ಮಾಡು |
| ನಿಗುರು | ೧-೧೨ | ನೆಟ್ಟಗಾಗು |
| ನಿಚ್ಚಟರು | ೧-೭, ೧-೯ | ನಿಷ್ಕಪಟರು |
| ನಡುಗಣ್ | ೧-೫ | ಶಿವನ ಫಾಲನೇತ್ರ |
| ನಿಬ್ಬೊಗೆ | ೧-೨೬ | ನಿಟ್ಟುಸಿರು |
| ನಾಣಿ | ೨-೪೩ | ನಾಚಿಕೆ ಇಲ್ಲದವ |
| ನೇಸರು | ೩-೯ | ಸೂರ್ಯ |
| ನೆಗಳು | ೩-೧೧ | ಮೊಸಳೆ |

## ಪ

| | | |
|---|---|---|
| ಪರಕೆ | ೨–೧೮ | ಹರಕೆ |
| ಪರಪರಿಸುವ | ೧–೧೫ | ಅಹಂಕರಿಸುವ |
| ಪರಿಸ | ೧–೧೨ | ಸ್ಪರುಶವ ಣಿ |
| ಪೂಸಿದ | ೧–೪೯ | ಧರಿಸಿದ |
| ಪೂಷ | ೧–೫೦ | ಸೂರ್ಯ |
| ಪ್ರಚಯ | ೧–೫೬ | ಸಮೂಹ |
| ಪೊಣ್ಮು | ೧–೫೪ | ಹೊರಡುವುದು |
| ಪೊರ್ಬುಗಿಲ್ | ೧–೬೮ | ಭುಗಿಲ್ ಭುಗಿಲ್ ಎಂಬ ಬೆಂಕಿ |
| ಪಕ್ಕರಿಕೆ | ೨–೩೦ | ಕುದುರೆಯ ಜೀನು |
| ಪಿಲ್ಲಣಿಗೆ | ೨–೨೧ | ಗದೆ |
| ಪೇರ್ಬಾಳು | ೨–೩೦ | ದೊಡ್ಡ ಕತ್ತಿ |

## ಬ

| | | |
|---|---|---|
| ಬಾದಣ | ೨–೭ | ಕಿಟಕಿ, ವಾತಾಯನ |
| ಬಾಳು | ೧–೧೬ | ಖಡ್ಗ, ಕತ್ತಿ |
| ಬಿನದ | ೧–೨೧ | ವಿನೋದ |
| ಬಿಸುಗಣ್ಣ | ೨–೨೫ | ಶಿವ, ಅಗ್ನಿನೇತ್ರವುಳ್ಳವ |
| ಬೆಳತಿಗೆ | ೧–೧೬ | ಬಿಳುಪಾದ, ಹೊಳಪಾದ |
| ಬೇಗೆ | ೧–೫೬ | ಬೆಂಕಿ, ಅಗ್ನಿ |

## ಭ

| | | |
|---|---|---|
| ಭವಿ | ೨–೩೩ | ಹುಟ್ಟುಸಾವಿಗೆ ಕಟ್ಟುಬಿದ್ದವ |
| ಭಾಷೆ | ೨–೧೦ | ಪ್ರತಿಜ್ಞೆ |

## ಮ

| | | |
|---|---|---|
| ಮಖಶಾಲೆ | ೨–೪೫ | ಯಜ್ಞಶಾಲೆ |
| ಮದ | ೧–೩೦ | ಅಹಂಕಾರ |
| ಮರುಳ | ೧–೨೨ | ಹುಚ್ಚ |

| | | |
|---|---|---|
| ಮುಸುಳು | ೧–೬೨ | ಹಿಂಗು, ಕಾಂತಿಶೂನ್ಯನಾಗು |
| ಮಂತಣ | ೧–೨೩ | ಆಲೋಚನೆ |
| ಮಂತ್ರ | ೧–೩೩ | ಉಪಾಯ |
| ಮಿಡುಗುರಿ | ೨–೪೬ | ಸಿಡಿಯುವ ಬೆಂಕಿ |
| ಮೊಗರಂಗ | ೨_೨೮ | ಆನೆಗಳ ಮುಖವಾಡ |
| ಮೊರಡಿ | ೧–೩೪ | ಗುಡ್ಡ, ದಿಣ್ಣೆ |

## ಯ

| | | |
|---|---|---|
| ಯೂಪ | ೧–೩೮ | ಯಜ್ಞಶಾಲೆಯಲ್ಲಿ ಪಶುಗಳನ್ನು ಕಟ್ಟುವ ಕಂಬ |

## ರ

| | | |
|---|---|---|
| ರಜ | ೨–೨೨ | ಧೂಳು |
| ರಿಂಗಣಗುಣಿತ | ೨-೧೯ | ಒಂದು ಬಗೆಯ ನರ್ತನ |

## ಲ

| | | |
|---|---|---|
| ಲೆಕ್ಕಿಸು | ೧–೬೪ | ಗೌರವಿಸು |
| ಉಳಿ | ೨–೨೮ | ಕೈಚಳಕ |

## ಸ

| | | |
|---|---|---|
| ಸತ್ತಿಗೆ | ೨–೪ | ಕೊಡೆ, ಛತ್ರಿಕಾ |
| ಸಮ್ಮಟಿಗೆ | ೨–೯ | ಕೊಡತಿ |
| ಸೀಗುರಿ | ೧–೧೪ | ಪತಾಕೆ, ಚಾಮರ |
| ಸುತ | ೧-೮ | ಮಗ (ಶಿಷ್ಯ) |
| ಸುದತಿ | ೧–೭೦ | ಹೆಂಗುಸು |
| ಸುತ್ತುಗೆ | ೧–೧೬ | ಸುತ್ತಿರುವ ಗುಂಪು |
| ಸರಗಿರಿ | ೧–೧೦ | ಮೇರುಪರ್ವತ |
| ಸೂರುಳು | ೨–೧೩ | ಆಣೆ |
| ಸಂತೆ | ೧–೧೫ | ಜನರ ಗುಂಪು |

| | | |
|---|---|---|
| ಸಿಂಪು | ೧-೨೨ | ಚಿಪ್ಪು |
| ಸ್ರುಕ್ | ೨-೫೫ | ಹೂವಿನ ದಂಡೆ |
| ಸ್ರುವ | ೨-೫೫ | ಯಜ್ಞದ ಸೌಟು |

ಹ

| | | |
|---|---|---|
| ಹಗ್ಗಿ | ೨-೧ | ಬೆಂಕಿ |
| ಹೊಗರಿಡು | ೧-೪೯ | ಪ್ರಕಾಶಿಸು |
| ಹುರಿಗುಟ್ಟು | ೧-೨೪ | ತನನ್ನು ತಾನೇ ಹಳಿದುಕೊಳ್ಳು |
| ಹುಗ್ಗಿ | ೨-೧೫ | ಗೋಧಿಯಪಾಯಸ |
| ಹುಡಿಗೆಯ್ | ೧-೭ | ಪುಡಿ ಮಾಡು |
| ಹದುಳ | ೧-೬೦ | ಕ್ಷೇಮ |
| ಹಳಚುವ | ೧-೧೦ | ತಾಕುವ |
| ಹರವಡೆ | ೧-೨೫ | ಪ್ರಸಿದ್ಧಿ |
| ಹಾಹೆ | ೨-೬ | ಕಾಲುಪಡೆಯ ಗುಂಪು |
| ಹೊಲ್ಲ | ೧-೨೫ | ಅಯೋಗ್ಯ |
| ಹೋಮ | ೧-೩೦ | ಯಜ್ಞ |
| ಹಳವಿಗೆ | ೨-೩೦ | ಬಾವುಟ, ಧ್ವಜ. |



